| | | |
|---|---|---|
| (ಋ) | ಪಡುಬಿದ್ರಿಯಲ್ಲಿ ಹಲವಾರು ವಸತಿ, ವಾಣಿಜ್ಯ ಕಟ್ಟಡಗಳು ಹಾಗೂ ಕೈಗಾರಿಕಾ ಘಟಕಗಳು ಬಹಳ ವೇಗವಾಗಿ ಸ್ಥಾಪನೆ ಆಗುತ್ತಿದ್ದು ಹೊಸದಾಗಿ ಆಗ್ನಿ ಶಾಮಕ ಠಾಣೆಯನ್ನು ಮಂಜೂರು ಮಾಡಲು ಈಗಾಗಲೇ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, |
| ಎ) | ಹಾಗಿದ್ದಲ್ಲಿ, ವೇಗವಾಗಿ ಅಭಿವೃದ್ಧಿ ಹೊಂದುತ್ತಿರುವ ಕಾಪು ತಾಲ್ಲೂಕಿಗೆ ಯಾವುದೇ ಆಗ್ನಿ ಶಾಮಕ ಠಾಣೆಗಳಿಲ್ಲದೇ ಆಕಸ್ಮಿಕ ಆಗ್ನಿ ಅವಘಡದ ಸಂದರ್ಭಗಳಲ್ಲಿ ಸುಮಾರು 35 ಕಿ.ಮೀ ದೂರದ ಉಡುಪಿ ತಾಲ್ಲೂಕಿನ ಠಾಣೆಯನ್ನೇ ಅವಲಂಬಿಸಬೇಕಾದ ಅನಿವಾರ್ಯತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಏ) | ಬಂದಿದ್ದಲ್ಲಿ, ಕಾಪು ತಾಲ್ಲೂಕಿನ ಪಡುಬಿದ್ರಿಯಲ್ಲಿ ಹೊಸದಾಗಿ ಆಗ್ನಿ ಶಾಮಕ ಠಾಣೆಯನ್ನು ಆದ್ಯತೆಯಲ್ಲಿ ಈ ವರ್ಷವೇ ಮಂಜೂರು ಮಾಡಲು ಸರ್ಕಾರ ಕ್ರಮ ವಹಿಸಬಹುದೇ? | ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 72 ಎಸ್‌ಎಫ್‌ಬಿ 2021, ದಿನಾಂಕ:11.11.2021 ರಲ್ಲಿ ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಇಲಾಖೆಗೆ 2021-22ನೇ ಸಾಲಿನಿಂದ 2025-26ನೇ ಸಾಲಿನವರೆಗೆ ಕೆ-ಸೇಫ್-2 ಯೋಜನೆಗೆ ಅನುಮೋದನೆ ನೀಡಿದ್ದು, ಕಾಪು ತಾಲ್ಲೂಕಿನ ಪಡುಬಿದ್ರಿ ಭಾಗದಲ್ಲಿ ಖಾಯಂ ಅಗ್ನಿಶಾಮಕ ಠಾಣೆಯನ್ನು ನಿರ್ಮಿಸಲು ರೂ.300.00 ಲಕ್ಷಗಳ ಅನುದಾನವನ್ನು ಮೀಸಲಿಡಲಾಗಿದೆ.<br>ಮುಂದುವರೆದು ಪ್ರಸ್ತಾಪಿತ ಆದೇಶದನ್ವಯ ಪಡುಬಿದ್ರಿಯಲ್ಲಿ ಖಾಯಂ ಅಗ್ನಿಶಾಮಕ ಠಾಣೆಯನ್ನು 2024-25ನೇ ಸಾಲಿನಲ್ಲಿ ನಿರ್ಮಿಸಲು ಕ್ರಮಕೈಗೊಳ್ಳಲಾಗುವುದು. |

**ಸಂಖ್ಯೆ: ಹೆಚ್‌ಡಿ 18 ಇಎಮ್‌ಎ2022**

**(ಆರಗ ಜ್ಞಾನೇಂದ್ರ)**
ಗೃಹ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 602

ಸದಸ್ಯರ ಹೆಸರು : ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ)

ಉತ್ತರಿಸುವ ದಿನಾಂಕ : 20.09.2022.

ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಯಾದಗಿರಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಇರುವ ಗ್ರಾಮ ಪಂಚಾಯಿತಿಗಳಲ್ಲಿ PDO ಗಳು ಸರಿಯಾಗಿ ಕಾರ್ಯನಿರ್ವಹಿಸದಿರುವುದರಿಂದ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸಾಧ್ಯವಾಗದೇ ಸಾರ್ವಜನಿಕರಿಗೆ ತುಂಬಾ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿಲ್ಲ.<br><br>ಯಾದಗಿರಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಯಾದಗಿರಿ ತಾಲ್ಲೂಕಿನ 07 ಗ್ರಾಮ ಪಂಚಾಯತಿಗಳು, ಶಹಾಪೂರ ತಾಲ್ಲೂಕಿನ 07 ಗ್ರಾಮ ಪಂಚಾಯತಿಗಳು ಹಾಗೂ ವಡಗೇರಾ ತಾಲ್ಲೂಕಿನ 17 ಗ್ರಾಮ ಪಂಚಾಯತಿಗಳು ಇದ್ದು, ಸರ್ಕಾರದ ವಿವಿಧ ಯೋಜನೆಗಳನ್ನು ಸರ್ಮಪಕವಾಗಿ ಅನುಷ್ಠಾನಗೊಳಿಸಲು ಹಾಗೂ ಸಾರ್ವಜನಿಕರಿಗೆ ಮೂಲಭೂತ ಸೌಕರ್ಯಗಳನ್ನು ತೊಂದರೆಯಾಗದಂತೆ ಕೇಂದ್ರ ಸ್ಥಾನದಲ್ಲಿದ್ದು ಕರ್ತವ್ಯ ನಿರ್ವಹಿಸುವಂತೆ ಜಿಲ್ಲೆಯ ಎಲ್ಲಾ ಪಂಚಾಯತ ಅಭಿವೃದ್ಧಿ ಅಧಿಕಾರಿಗಳಿಗೆ ಅಗತ್ಯ ಸಲಹೆ-ಸೂಚನೆಗಳನ್ನು ನೀಡಿ ಕ್ರಮವಹಿಸಲಾಗಿರುತ್ತದೆ. |
| (ಆ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; | |
| (ಇ) | ಎಲ್ಲಾ ಗ್ರಾಮ ಪಂಚಾಯಿತಿಗಳಿಗೆ ಘನ ತ್ಯಾಜ್ಯ ವಸ್ತು ವಿಲೇವಾರಿ ವಾಹನಗಳನ್ನು ಸರ್ಕಾರದಿಂದ ನೀಡಲಾಗಿದ್ದು, ಸದರಿ ವಾಹನಗಳಿಗೆ ಚಾಲಕರನ್ನು ನೇಮಕ ಮಾಡದಿರುವುದು ಹಾಗೂ ವಾಹನಗಳು ಚಾಲನೆಯಲ್ಲಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು? | ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಘನ ತ್ಯಾಜ್ಯ ವಸ್ತು ವಿಲೇವಾರಿ ವಾಹನಗಳನ್ನು ಸರಬರಾಜು ಮಾಡಲಾಗಿರುತ್ತದೆ. ಸದರಿ ವಾಹನಗಳಿಗೆ ಸರ್ಕಾರದ ಮಾರ್ಗಸೂಚಿಯಂತೆ ಎಸ್.ಹೆಚ್.ಜಿ. ಮಹಿಳೆಯರ ಮೂಲಕ ವಾಹನ ಚಾಲಕರನ್ನಾಗಿ ತರಬೇತಿ ನೀಡಿ ವಾಹನ ಚಲಾಯಿಸಲು ಕ್ರಮವಹಿಸಲಾಗಿದೆ. |

ಸಂಖ್ಯೆ: ಗ್ರಾಅಪ 283 ಗ್ರಾಪಂಅ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ.

## ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 603
2. ಸದಸ್ಯರ ಹೆಸರು : ಶ್ರೀ ಗೌರಿಶಂಕರ್ ಡಿ.ಸಿ.
3. ಉತ್ತರಿಸಬೇಕಾದ ದಿನಾಂಕ : 20-09-2022.
4. ಉತ್ತರಿಸುವವರು : ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಇತ್ತೀಚಿಗೆ ಅತಿವೃಷ್ಟಿಯಿಂದಾಗಿ ಸುರಿದ ಭಾರಿ ಮಳೆಯಿಂದಾಗಿ ಗ್ರಾಮೀಣ ಪ್ರದೇಶದ ಕೆರೆ ಕಟ್ಟೆಗಳು ಮತ್ತು ಚೆಕ್ ಡ್ಯಾಮ್‌ಗಳು ಒಡೆದು ರೈತರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಯಾವ ಕೆರೆಗಳನ್ನು ದುರಸ್ಥಿಗೊಳಿಸಬೇಕಾಗಿದೆ; (ಕೆರೆವಾರು/ ಗ್ರಾಮವಾರು ಸಂಪೂರ್ಣ ವಿವರ ಒದಗಿಸುವುದು) | ಬಂದಿದೆ.<br><br>ಹಾನಿಗೊಳಗಾದ ಕೆರೆಗಳ ವಿವರಗಳನ್ನು ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ.<br><br>ಅನುದಾನದ ಲಭ್ಯತೆನುಸಾರ ಕಾಮಗಾರಿಗಳನ್ನು ಕೈಗೊಳ್ಳಲು ಕ್ರಮ ವಹಿಸಲಾಗುವುದು. |
| ಆ | ಭಾರಿ ಮಳೆಗೆ ಹಾನಿಯಾಗಿರುವ ಕೆರೆ ಮತ್ತು ಚೆಕ್ ಡ್ಯಾಮ್‌ಗಳನ್ನು ದುರಸ್ತಿಗೊಳಿಸಲು ಅಂದಾಜಿಸಲಾದ ಮೊತ್ತವೆಷ್ಟು ಹಾಗೂ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು; (ವಿವರ ಒದಗಿಸುವುದು) | |
| ಇ | ಭಾರಿ ಮಳೆಗೆ ಹಾನಿಯಾಗಿರುವ ರೈತರ ಬೆಳೆಗಳು ಯಾವುವು; ಎಷ್ಟು ವಿಸ್ತೀರ್ಣದ, ಯಾವ ಗ್ರಾಮಗಳಲ್ಲಿ ಬೆಳೆ ಹಾಳಾದ ಅಂದಾಜು ನಷ್ಟದ ಪ್ರಮಾಣವೆಷ್ಟು; ಅವರಿಗೆ ಯಾವ ಕಾಲಮಿತಿಯೊಳಗೆ ಪರಿಹಾರ ನೀಡಲು ಸರ್ಕಾರ ಯೋಜಿಸಿದೆ; (ವಿವರ ಒದಗಿಸುವುದು) | ತುಮಕೂರು ಜಿಲ್ಲೆಯಲ್ಲಿ ಅತಿವೃಷ್ಟಿ/ಪ್ರವಾಹದಿಂದ ಉಂಟಾದ ಬೆಳೆ ಹಾನಿ ತಾಲ್ಲೂಕುವಾರು ವಿವರಗಳನ್ನು ಅನುಬಂಧ-2ರಲ್ಲಿ ನೀಡಲಾಗಿದೆ.<br>ಬೆಳೆ ಹಾನಿ ವಿವರಗಳನ್ನು ಪರಿಹಾರ ತಂತ್ರಾಂಶದಲ್ಲಿ ದಾಖಲಿಸಿದ ನಂತರ DBT ಮೂಲಕ ನೇರವಾಗಿ ಇನ್‌ಪುಟ್ ಸಬ್ಸಿಡಿಯನ್ನು ಅರ್ಹ ರೈತರಿಗೆ ನೇರವಾಗಿ ಅವರುಗಳ ಬ್ಯಾಂಕ್ ಖಾತೆಗೆ ಜಮೆ ಮಾಡಲಾಗುತ್ತದೆ.<br>ಈವರೆವಿಗೂ ತುಮಕೂರು ಜಿಲ್ಲೆಯಲ್ಲಿ ಫೇಸ್-1ರಲ್ಲಿ 1315 ರೈತರಿಗೆ ರೂ.144.35ಲಕ್ಷ ಇನ್‌ಪುಟ್ ಸಬ್ಸಿಡಿಯನ್ನು ಪರಿಹಾರ ತಂತ್ರಾಂಶದ ಮೂಲಕ ನೇರವಾಗಿ ಅವರುಗಳ ಬ್ಯಾಂಕ್ ಖಾತೆಗೆ ಜಮೆ ಮಾಡಲಾಗಿರುತ್ತದೆ. ಫೇಸ್-2ರಲ್ಲಿ 1455 ರೈತರಿಗೆ ರೂ.109.89 ಲಕ್ಷ ಇನ್‌ಪುಟ್ ಸಬ್ಸಿಡಿಯನ್ನು ಪರಿಹಾರ ತಂತ್ರಾಂಶದ ಮೂಲಕ ನೇರವಾಗಿ ಅವರುಗಳ ಬ್ಯಾಂಕ್ ಖಾತೆಗೆ ಜಮೆ ಮಾಡಲಾಗಿರುತ್ತದೆ. |
| ಈ | ಇದುವರೆಗೂ ಹಾಳಾಗಿರುವ ಕೆರೆಗಳ ದುರಸ್ಥಿಗೆ ಬಿಡುಗಡೆಗೊಳಿಸಿದ ಮೊತ್ತವೆಷ್ಟು? | ವಿವರಗಳನ್ನು ಅನುಬಂಧ-3 ರಲ್ಲಿ ನೀಡಲಾಗಿದೆ. |

ಸಂಖ್ಯೆ:ಎಂಐಡಿ 270 ಎಲ್‌ಎಕ್ಯೂ 2022

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

## ವಿಧಾನಸಭೆ ಸದಸ್ಯರಾದ ಶ್ರೀ ಗೌರೀಶಂಕರ ಡಿ.ಸಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ: 603 ಕ್ಕೆ ಅನುಬಂಧ-1

## ತುಮಕೂರು ಗ್ರಾಮಾಂತರ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಮಳೆಹಾನಿ ಕಾಮಗಾರಿಗಳ ವಿವರ

| ಕ್ರ ಸಂ. | ಜಿಲ್ಲೆ | ತಾಲ್ಲೂಕು | ವಿಧಾನಸಭಾ ಕ್ಷೇತ್ರ | ಗ್ರಾಮ | ಹಾನಿಗೊಳಗಾದ ಕೆರೆ/ ಸಣ್ಣ ನೀರಾವರಿ ರಚನೆಗಳ ವಿವರ | ಕಾಮಗಾರಿಯ ಹೆಸರು | ತಾತ್ಕಾಲಿಕವಾಗಿ ದುರಸ್ತಿಗೊಳಿಸಲು ಅವಶ್ಯವಿರುವ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| **ಕೆರೆಗಳ ವಿವರಗಳು** | | | | | | | | |
| 1 | ತುಮಕೂರು | ತುಮಕೂರು | ತುಮಕೂರು ಗ್ರಾಮಾಂತರ | ಗೂಳೂರು | ಗೂಳೂರು ಅಮಾನಿಕೆರೆ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಗೂಳೂರು ಹೋಬಳಿ, ಗೂಳೂರು ಅಮಾನಿಕೆರೆ ಏರಿ ಅಭಿವೃದ್ಧಿ ಕಾಮಗಾರಿ. | 15.00 | ಪ್ರಸಕ್ತ ಸಾಲಿನಲ್ಲಿ ಮಳೆಯಿಂದ ಕೆರೆಯು ಕೋಡಿಬಿದ್ದಿದ್ದು ದಿನಾಂಕ 25-07-2022ರಂದು ಕೆರೆ ಏರಿಯ ಕೆಲವು ಭಾಗಗಳಲ್ಲಿ ನೀರು ಸೋರುವಿಕೆ ಕಂಡುಬಂದಿರುತ್ತದೆ. ಹಾಗೂ ಕೋಡಿಯ ಬಾಗದಲ್ಲಿ ಸೋರುವಿಕೆ ಇರುತ್ತದೆ. |
| 2 | ತುಮಕೂರು | ತುಮಕೂರು | ತುಮಕೂರು ಗ್ರಾಮಾಂತರ | ಹುಳ್ಳೇನಹಳ್ಳಿ | ಹುಳ್ಳೇನಹಳ್ಳಿ ಕೆರೆ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಗೂಳೂರು ಹೋಬಳಿ, ಹುಳ್ಳೇನಹಳ್ಳಿ ಕೆರೆ ಏರಿ ಮತ್ತು ಕೋಡಿ ಅಭಿವೃದ್ಧಿ ಕಾಮಗಾರಿ. | 10.00 | ಪ್ರಸಕ್ತ ಸಾಲಿನಲ್ಲಿ ಮಳೆಯಿಂದ ಕೆರೆಯು ಕೋಡಿಬಿದ್ದಿದ್ದು ದಿನಾಂಕ 02-08-2022ರಂದು ಕೆರೆ ಏರಿಯ ಮತ್ತು ಕೋಡಿಯ ಕೆಲವು ಭಾಗಗಳಲ್ಲಿ ನೀರು ಸೋರುವಿಕೆ ಕಂಡುಬಂದಿರುತ್ತದೆ. |
| 3 | ತುಮಕೂರು | ತುಮಕೂರು | ತುಮಕೂರು ಗ್ರಾಮಾಂತರ | ಅರಕೆರೆ | ಅರಕೆರೆ ಕೆರೆ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬ ಹೋಬಳಿ, ಅರಕೆರೆ ಕೆರೆ ಏರಿ ಮತ್ತು ಕೋಡಿ ಅಭಿವೃದ್ಧಿ ಕಾಮಗಾರಿ. | 5.00 | ಪ್ರಸಕ್ತ ಸಾಲಿನ ಮಳೆಯಿಂದ ಕೆರೆಯು ಭರ್ತಿಯಾಗಿದ್ದು ದಿನಾಂಕ 28/08/22 ರಂದು ಕೋಡಿಯಾಗಿರುತ್ತದೆ. ಕೆರೆಯ ಒಂದು ಭಾಗದಲ್ಲಿ ಏರಿ ಸೋರುವಿಕೆ ಕಂಡುಬಂದಿರುತ್ತದೆ ಹಾಗೂ ಕೋಡಿ ಹಳ್ಳದ ದಂಡೆಗಳು ಕೊರೆದು ಪ್ರವಾಹದ ಸಮಯದಲ್ಲಿ ಕೆಳ ಕಂಡೆಯಲ್ಲಿರುವ ಮನೆಗಳಿಗೆ ನೀರು ನುಗ್ಗಿ ಹಾನಿಯಾಗಿರುವುದು ಕಂಡುಬಂದಿರುತ್ತದೆ. |
| 4 | ತುಮಕೂರು | ತುಮಕೂರು | ತುಮಕೂರು ಗ್ರಾಮಾಂತರ | ಕುಚ್ಚಂಗಿ | ಕುಚ್ಚಂಗಿ ಕೆರೆ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬ ಹೋಬಳಿ, ಕುಚ್ಚಂಗಿ ಕೆರೆ ಏರಿ ಮತ್ತು ಕೋಡಿ ಅಭಿವೃದ್ಧಿ ಕಾಮಗಾರಿ. | 5.00 | ಪ್ರಸಕ್ತ ಸಾಲಿನ ಮಳೆಯಿಂದ ಕೆರೆಯು ಭರ್ತಿಯಾಗಿ ಕೋಡಿಯಾಗಿರುತ್ತದೆ. ಕೆರೆಯ ಒಂದು ಭಾಗದಲ್ಲಿ ಏರಿ ಸೋರುವಿಕೆ ಕಂಡುಬಂದಿರುತ್ತದೆ ಹಾಗೂ ಕೋಡಿಯ ಕಲ್ಲುಗಳು ಕಿತ್ತು ಬಾಗಶಃ ಹಾನಿಯಾಗಿರುವುದು ಕಂಡುಬಂದಿರುತ್ತದೆ. |
| 5 | ತುಮಕೂರು | ತುಮಕೂರು | ತುಮಕೂರು ಗ್ರಾಮಾಂತರ | ಸಿರಿವರ | ಸಿರಿವರ ಕೆರೆ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ಸಿರಿವರ ಕೆರೆ ಏರಿ ಅಭಿವೃದ್ಧಿ ಕಾಮಗಾರಿ. | 15.00 | ಪ್ರಸಕ್ತ ಸಾಲಿನ ಮಳೆಯಿಂದ ಕೆರೆಯು ಭರ್ತಿಯಾಗಿ ಕೋಡಿಯಾಗಿರುತ್ತದೆ. ಕೆರೆಯ ಒಂದು ಭಾಗದಲ್ಲಿ ಏರಿ ಸೋರುವಿಕೆ ಕಂಡುಬಂದಿರುತ್ತದೆ. |
| 6 | ತುಮಕೂರು | ತುಮಕೂರು | ತುಮಕೂರು ಗ್ರಾಮಾಂತರ | ಊರುಕೆರೆ | ಊರುಕೆರೆ ಕೆರೆ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬ ಹೋಬಳಿ, ಊರುಕೆರೆ ಕೆರೆ ಏರಿ ಅಭಿವೃದ್ಧಿ ಕಾಮಗಾರಿ. | 15.00 | ಪ್ರಸಕ್ತ ಸಾಲಿನ ಮಳೆಯಿಂದ ಕೆರೆಯು ಭರ್ತಿಯಾಗಿ ಕೋಡಿಯಾಗಿರುತ್ತದೆ. ಕೆರೆಯ ಸುಮಾರು 06 ಭಾಗದಲ್ಲಿ ಏರಿ ಸೋರುವಿಕೆ ಕಂಡುಬಂದಿರುತ್ತದೆ. |
| 7 | ತುಮಕೂರು | ತುಮಕೂರು | ತುಮಕೂರು ಗ್ರಾಮಾಂತರ | ಚಿಕ್ಕಕೊರಟಗೆರೆ | ದೇವರ ಅಮಾನಿಕೆರೆ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ದೇವರ ಅಮಾನಿಕೆರೆ ಪೋಷಕ ಹಳ್ಳದ ಎಸ್ಕೇಪ್ ವಿಯರ್ ಪುನರ್ ನಿರ್ಮಾಣ | 75.00 | ಕೆರೆಯ ಪೋಷಕ ನಾಲೆಗೆ ನಿರ್ಮಿಸಲಾಗಿದ್ದ ಎಸ್ಕೇಪ್ ವಿಯರ್ ಒಡೆದುಹೋಗಿರುತ್ತದೆ. |
| | | | | | | ಒಟ್ಟು | 140.00 | |
| **ಚೆಕ್ ಡ್ಯಾಂ/ಇತರೆ ರಚನಾ ಕಾಮಗಾರಿಗಳ ವಿವರಗಳು** | | | | | | | | |
| 1 | ತುಮಕೂರು | ತುಮಕೂರು | ತುಮಕೂರು ಗ್ರಾಮಾಂತರ | ಕೆ. ಪಾಲಸಂದ್ರ | ಕೆ. ಪಾಲಸಂದ್ರ ಚೆಕ್ ಡ್ಯಾಂ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಗೂಳೂರು ಹೋಬಳಿ, ಕೆ. ಪಾಲಸಂದ್ರ ಚೆಕ್‌ಡ್ಯಾಂ ಹತ್ತಿರ ರಕ್ಷಣಾ ಕಾಮಗಾರಿ. | 3.00 | ಚೆಕ್‌ಡ್ಯಾಂನ ಮೇಲ್ಭಾಗದ (ಅಪ್‌ಸ್ಟ್ರೀಮ್) ಏರಿಯು ಹಾನಿಗೊಂಡು ಅಕ್ಕಪಕ್ಕದ ರೈತರ ಜಮೀನುಗಳಿಗೆ ನೀರು ನುಗ್ಗಿ ಜಮೀನುಗಳು ಹಾನಿಯಾಗಿರುವುದು ಕಂಡು ಬಂದಿರುತ್ತದೆ. |
| 2 | ತುಮಕೂರು | ತುಮಕೂರು | ತುಮಕೂರು ಗ್ರಾಮಾಂತರ | ಕೋಳಿಹಳ್ಳಿ | ಕೋಳಿಹಳ್ಳಿ ಅಣೆಕಟ್ಟು | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು,ಕೋಳಿ ಹಳ್ಳಿ ಕೆರೆಗೆ ನೀರು ಹರಿಸಲು ನಿರ್ಮಿಸಲಾಗಿರುವ ತಿರುವುಕೋಡಿಯ (Diversion Weir) ತಡಗೋಡೆಯ ಪುನರ್ ನಿರ್ಮಾಣ | 60.00 | ಕೋಳಿ ಹಳ್ಳಿ ಕೆರೆಗೆ ನೀರು ಹರಿಸಲು ನಿರ್ಮಿಸಲಾಗಿರುವ ತಿರುವುಕೋಡಿಯ (Diversion Weir) ತಡಗೋಡೆಯು ಬಿದ್ದುಹೋಗಿರುತ್ತದೆ. |
| | | | | | | ಒಟ್ಟು | 63.00 | |

ಪ್ರ.ಸಂ-603ಕ್ಕೆ ಅನುಬಂಧ-2

Annexure 5C

Estimated loss to Horticulture / Agriculture/Sericulture/Plantation Crops affected due to floods ( Area in Hectares )

District: Tumkur

Agriculture Crop Wise Loss ( Area in Hectares)

| Sl. No | Taluk | Paddy | Ragi | Maize | Tur | Ground-nut | Sunflower | Cotton | Others | Total area affected |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | Chikkanayakanahalli | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 2 | Gubbi | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 3 | koratagere | 7.00 | 220.00 | 262.00 | 15.00 | 103.00 | 0.00 | 0.00 | 0.00 | 607.00 |
| 4 | kunigal | 0.00 | 25.00 | 0.00 | 0.00 | 0.00 | 0.00 | 0.00 | 0.00 | 25.00 |
| 5 | Madhugiri | 71.00 | 135.45 | 778.02 | 4.53 | 215.96 | 15.68 | 28.38 | 0.00 | 1249.02 |
| 6 | Pavagada | 3.00 | 8.30 | 57.70 | 5.80 | 164.62 | 27.40 | 348.84 | 0.00 | 615.66 |
| 7 | Sira | 0.00 | 116.00 | 5.00 | 0.00 | 260.00 | 10.00 | 250.00 | 0.00 | 641.00 |
| 8 | Tiptur | 0.40 | 1.82 | 0.27 | 0.00 | 0.00 | 0.00 | 0.00 | 0.00 | 2.49 |
| 9 | Tumkur | 1.96 | 13.01 | 3.23 | 0.00 | 0.80 | 0.00 | 0.00 | 2.96 | 21.96 |
| 10 | Turuvekere | 0.40 | 0.00 | 0.00 | 0.00 | 0.00 | 0.00 | 0.00 | 0.00 | 0.40 |
| | District Total | 83.76 | 519.58 | 1106.22 | 25.33 | 744.38 | 53.08 | 627.22 | 2.96 | 3162.58 |

Horticulture Crop Wise Loss (Annual Crops) ( Area in Hectares)

| Sl. No | Taluk | Banana | Tomato | Chilly | Onion | Cucumber/Gherkin | Brinjal | Bendi | Marigold | Ridgegourd | Cabbage | Flowers | Ginger | Pumkin | Chrysanthemum | Beans | Leafy vegetables | Water melon | Other vegetables | Total |
|---|---|---|---|---|---|---|---|---|---|---|---|---|---|---|---|---|---|---|---|---|
| 1 | 2 | 12 | 13 | 14 | 15 | 16 | 17 | 18 | 19 | 20 | 21 | 22 | 23 | 24 | 25 | 26 | 27 | 28 | 29 | 30 |
| 1 | Chikkanayakanahalli | 0.01 | 13.40 | 5.93 | 1.00 | 1.60 | 4.10 | 0.00 | 0.00 | 0.20 | 0.00 | 1.10 | 0.00 | 0.00 | 0.00 | 2.90 | 0.00 | 0.00 | 0.40 | 28.64 |
| 2 | Gubbi | 7.20 | 22.23 | 0.00 | 0.00 | 0.00 | 0.00 | 0.00 | 0.00 | 0.00 | 0.00 | 2.23 | 0.00 | 0.00 | 0.00 | 0.90 | 2.00 | 0.00 | 0.00 | 34.56 |
| 3 | koratagere | 2.86 | 7.56 | 1.40 | 0.40 | 0.00 | 0.80 | 0.00 | 0.00 | 0.00 | 0.00 | 27.74 | 0.00 | 0.00 | 0.00 | 1.40 | 0.00 | 0.00 | 0.00 | 42.16 |
| 4 | kunigal | 4.22 | 0.29 | 0.00 | 0.00 | 0.15 | 0.34 | 0.00 | 0.00 | 0.00 | 0.80 | 0.00 | 0.00 | 1.00 | 0.83 | 0.00 | 0.00 | 0.00 | 0.20 | 7.83 |
| 5 | Madhugiri | 4.20 | 10.80 | 7.00 | 0.00 | 0.00 | 0.00 | 0.00 | 0.00 | 0.00 | 0.00 | 2.40 | 0.00 | 0.00 | 15.20 | 2.00 | 0.00 | 0.80 | 0.00 | 42.40 |
| 6 | Pavagada | 3.00 | 508.50 | 20.06 | 8.64 | 0.40 | 4.65 | 0.00 | 3.82 | 0.00 | 0.00 | 3.65 | 0.00 | 0.00 | 12.01 | 0.00 | 0.00 | 4.80 | 11.50 | 580.53 |
| 7 | Sira | 0.75 | 19.95 | 16.05 | 14.60 | 0.80 | 4.10 | 0.00 | 3.40 | 0.40 | 0.00 | 0.00 | 0.00 | 0.00 | 3.60 | 0.80 | 0.00 | 0.60 | 1.90 | 66.85 |
| 8 | Tiptur | 0.88 | 4.36 | 0.80 | 0.00 | 0.00 | 0.50 | 0.40 | 0.00 | 0.00 | 0.00 | 0.00 | 0.00 | 0.00 | 5.13 | 0.00 | 0.00 | 0.00 | 0.00 | 12.07 |
| 9 | Tumkur | 0.60 | 8.60 | 0.20 | 0.00 | 1.00 | 0.80 | 0.20 | 0.80 | 0.00 | 0.00 | 0.80 | 0.00 | 0.00 | 4.50 | 0.40 | 0.40 | 0.00 | 0.60 | 18.90 |
| 10 | Turuvekere | 2.94 | 2.20 | 0.40 | 0.00 | 0.40 | 0.00 | 0.00 | 0.00 | 0.00 | 0.00 | 0.00 | 0.30 | 0.00 | 0.00 | 0.00 | 0.00 | 0.00 | 0.00 | 6.24 |
| | District Total | 26.66 | 595.79 | 51.84 | 24.64 | 4.35 | 15.29 | 0.60 | 7.52 | 0.60 | 0.80 | 37.92 | 0.30 | 1.00 | 41.27 | 8.40 | 2.40 | 6.20 | 14.60 | 840.18 |

Horticulture Crop Wise Loss (Perennial Crops) ( Area in Hectares)

| Sl. No | Taluk | Pomogranate | Coconut | Mango | Guava | Arecanut | Lime/Citrus | Papaya | Betelvine | Black pepper | Drum stick | Jasmin | Others | Total |
|---|---|---|---|---|---|---|---|---|---|---|---|---|---|---|
| 31 | 32 | 33 | 34 | 35 | 36 | 37 | 38 | 39 | 40 | 41 | 42 | 43 | 44 | 45 |
| 1 | Chikkanayakanahalli | 1.00 | 0.57 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 1.57 |
| 2 | Gubbi | 0.00 | 14.20 | 0.00 | 0.00 | 17.95 | 0.00 | 2.80 | 4.00 | 5.20 | 0.00 | 0.00 | 0.00 | 44.15 |
| 3 | koratagere | 0.00 | 0.10 | 0.20 | 0.00 | 7.03 | 0.05 | 0.80 | 0.25 | 1.00 | 0.00 | 0.00 | 0.00 | 9.43 |
| 4 | kunigal | 0.00 | 0.05 | 0.00 | 0.00 | 0.00 | 0.00 | 0.20 | 0.00 | 0.00 | 0.00 | 0.00 | 0.00 | 0.25 |
| 5 | Madhugiri | 3.00 | 0.80 | 0.00 | 0.40 | 15.45 | 0.00 | 0.25 | 0.00 | 0.00 | 0.00 | 9.93 | 0.00 | 29.83 |
| 6 | Pavagada | 2.70 | 0.20 | 0.00 | 0.00 | 18.27 | 0.00 | 0.90 | 0.46 | 0.00 | 0.60 | 0.00 | 0.00 | 23.13 |
| 7 | Sira | 4.30 | 0.80 | 0.00 | 0.00 | 11.20 | 0.00 | 3.80 | 0.00 | 0.00 | 0.30 | 1.00 | 1.60 | 23.00 |
| 8 | Tiptur | 0.00 | 0.00 | 0.00 | 0.00 | 8.32 | 0.00 | 0.40 | 0.00 | 0.00 | 0.00 | 0.00 | 1.30 | 10.02 |
| 9 | Tumkur | 0.00 | 0.00 | 0.00 | 0.00 | 2.00 | 0.00 | 2.20 | 0.40 | 0.00 | 0.00 | 0.00 | 0.00 | 4.60 |
| 10 | Turuvekere | 0.00 | 0.80 | 0.00 | 0.00 | 1.93 | 0.00 | 0.00 | 0.00 | 0.00 | 0.00 | 0.00 | 0.00 | 2.73 |
| | District Total | 11.00 | 17.52 | 0.20 | 0.40 | 82.15 | 0.05 | 11.35 | 5.11 | 6.20 | 0.90 | 10.93 | 2.90 | 148.71 |

Deputy Commissioner
Tumkur District.

ವಿಧಾನಸಭೆ ಸದಸ್ಯರಾದ ಶ್ರೀ ಗೌರೀಶಂಕರ ಡಿ.ಸಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ: 603 ಕ್ಕೆ ಅನುಬಂಧ-3

**2021-22 ನೇ ಸಾಲಿನಲ್ಲಿ ತುಮಕೂರು ಗ್ರಾಮಾಂತರ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಮಳೆಹಾನಿ ಕಾಮಗಾರಿಗಳಿಗೆ ಒದಗಿಸಲಾದ ಅನುದಾನದ ವಿವರಗಳು**

| ಕ್ರ ಸಂ. | ಜಿಲ್ಲೆ | ತಾಲ್ಲೂಕು | ವಿಧಾನಸಭಾ ಕ್ಷೇತ್ರ | ಗ್ರಾಮ | ಹಾನಿಗೊಳಗಾದ ಕೆರೆ/ ಸಣ್ಣ ನೀರಾವರಿ ರಚನೆಗಳ ವಿವರ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಷರಾ |
|---|---|---|---|---|---|---|---|---|
| 1 | ತುಮಕೂರು | ತುವಕೂರು | ತುಮಕೂರು ಗ್ರಾಮಾಂತರ | ಗೂಳೂರು | ಗೂಳೂರು ಅಮಾನಿಕೆರೆ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಗೂಳೂರು ಹೋಬಳಿ, ಗೂಳೂರು ಅಮಾನಿಕೆರೆ ಏರಿ ಅಭಿವೃದ್ಧಿ ಕಾಮಗಾರಿ. | 20.00 | ಅನುದಾನ ಮಂಜೂರಾಗಿದ್ದು, ಕಾಮಗಾರಿಗಳನ್ನು ಕೈಗೊಳ್ಳಲು ಕ್ರಮವಹಿಸಲಾಗುವುದು. |
| 2 | ತುಮಕೂರು | ತುವಕೂರು | ತುಮಕೂರು ಗ್ರಾಮಾಂತರ | ಸಿರಿವರ | ಸಿರಿವರ ಕೆರೆ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ಸಿರಿವರ ಕೆರೆ ಏರಿ ಅಭಿವೃದ್ಧಿ ಕಾಮಗಾರಿ. | 20.00 | |
| 3 | ತುಮಕೂರು | ತುವಕೂರು | ತುಮಕೂರು ಗ್ರಾಮಾಂತರ | ಹೊಳಕಲ್ | ಹೊಳಕಲ್ ಕೆಂಚಕಲ್ | ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಹೊಳಕಲ್ ಕೆಂಚಕಲ್ ಕೆರೆ ಕೋಡಿ ದುರಸ್ತಿ | 15.00 | |
| | | | | | | ಒಟ್ಟು | 55.00 | |

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 688 |
| ಸದಸ್ಯರ ಹೆಸರು | ಶ್ರೀ ವೀರಭದ್ರಯ್ಯ.ಎಂ.ವಿ (ಮಧುಗಿರಿ) |
| ಉತ್ತರಿಸಬೇಕಾದ ದಿನಾಂಕ | 20.09.2022 |

| ಕ್ರ.ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಇತ್ತೀಚಿನ ಮಳೆಯಿಂದಾಗಿ ಮಧುಗಿರಿ ಕ್ಷೇತ್ರದ ವ್ಯಾಪ್ತಿಯ ಗ್ರಾಮೀಣ ರಸ್ತೆಗಳು ಸಂಪೂರ್ಣವಾಗಿ ಹಾಳಾಗಿ ಸಾರ್ವಜನಿಕರ ಹಾಗೂ ವಾಹನ ಸಂಚಾರಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ. | ಬಂದಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಅನುದಾನ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು). | ಅನುದಾನ ಲಭ್ಯತೆಯನ್ನಾಧರಿಸಿ ಕ್ರಮವಹಿಸಲಾಗುವುದು |

ಸಂಖ್ಯೆ:ಗ್ರಾಅಪ:15ನೇ ವಿಸ:13ಅ:ಆರ್‌ಆರ್‌ಸಿ:ಚುರಪ್ರ:688:2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

5ು

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ. ವೀರಭದ್ರಯ್ಯ ಎಂ.ವಿ (ಮಧುಗಿರಿ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 689

ಉತ್ತರ ದಿನಾಂಕ : 20-09-2022

ಉತ್ತರಿಸುವವರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮಧುಗಿರಿ ಕ್ಷೇತ್ರವು ಡಾ\|\| ನಂಜುಂಡಪ್ಪ ವರದಿಯನ್ವಯ ಅತ್ಯಂತ ಹಿಂದುಳಿದ ಪ್ರದೇಶವಾಗಿದ್ದು, ಕ್ಷೇತ್ರದ ವ್ಯಾಪ್ತಿಯಲ್ಲಿ ಹೆಚ್ಚಾಗಿ ಬರುವ ಗೊಲ್ಲರಹಟ್ಟಿಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ಇಲ್ಲಿ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಯಾವಾಗ ಮಂಜೂರು ಮಾಡಿ ಸ್ಥಾಪಿಸಲಾಗುವುದು? (ಸಂಪೂರ್ಣ ವಿವರ ನೀಡುವುದು). | ಮಧುಗಿರಿ ತಾಲ್ಲೂಕಿನಲ್ಲಿ ಒಟ್ಟು 26 ಗೊಲ್ಲರಹಟ್ಟಿ ಜನವಸತಿಗಳಿದ್ದು, ಸದರಿ ಜನವಸತಿಗಳಿಗೆ 2013-14 ರಿಂದಲೂ ಕಿರು ನೀರು ಸರಬರಾಜು ಯೋಜನೆಯಡಿ ಕುಡಿಯುವ ನೀರನ್ನು ಒದಗಿಸಲಾಗುತ್ತಿದೆ.<br>2021-22 ಮತ್ತು 2022-23ನೇ ಸಾಲಿನಲ್ಲಿ ಜಲಜೀವನ್ ಮಿಷನ್ ಯೋಜನೆಯಡಿಯಲ್ಲಿ ತಾಲ್ಲೂಕಿನ ಎಲ್ಲಾ ಗ್ರಾಮಗಳಿಗೆ ಕಾರ್ಯಾತ್ಮಕ ನಳ ನೀರು ಸಂಪರ್ಕ ಕಲ್ಪಿಸುವ ಕಾಮಗಾರಿಯ ಕ್ರಿಯಾ ಯೋಜನೆ ಅನುಮೋದನೆಯಾಗಿರುತ್ತದೆ.<br>2024ನೇ ಸಾಲಿನ ಅಂತ್ಯದೊಳಗೆ ಎಲ್ಲಾ ಗ್ರಾಮೀಣ ಜನವಸತಿಗಳಿಗೆ ಕಾರ್ಯಾತ್ಮಕ ನಳ ಸಂಪರ್ಕ ಮೂಲಕ ಶುದ್ಧ ಕುಡಿಯುವ ನೀರನ್ನು ಒದಗಿಸಲು ಯೋಜಿಸಲಾಗಿದೆ.<br>ಮಧುಗಿರಿ ತಾಲ್ಲೂಕಿನಲ್ಲಿರುವ ಒಟ್ಟು 26 ಗೊಲ್ಲರಹಟ್ಟಿ ಜನವಸತಿಗಳಲ್ಲಿ ಕುಡಿಯುವ ನೀರಿನಲ್ಲಿ ಫ್ಲೋರೈಡ್ ಅಂಶವಿರುವ 7 ಜನವಸತಿಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಸ್ಥಾಪಿಸಲಾಗಿರುತ್ತದೆ. ವಿವರಗಳನ್ನು **ಅನುಬಂಧ-1 & 2** ರಲ್ಲಿ ಲಗತ್ತಿಸಿದೆ. |

ಸಂ:ಗ್ರಾಕುನೀ&ನೈಇ 447 ಗ್ರಾನೀಸ(4)2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

## ಅನುಬಂಧ – 1

ಮಾನ್ಯ ಶ್ರೀ ವೀರಭದ್ರಯ್ಯ.ಎಂ.ವಿ, ವಿಧಾನಸಭಾ ಸದಸ್ಯರು ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 689ಕ್ಕೆ ಉತ್ತರ.

| ಕ್ರ ಸಂ. | ಜಿಲ್ಲೆ | ತಾಲ್ಲೂಕು | ಗ್ರಾಮಪಂಚಾಯಿತಿ | ಗ್ರಾಮ | ಜನವಸತಿ | ಹಾಲಿ ಕುಡಿಯುವ ನೀರು ಸರಬರಾಜು ಮಾಡುತ್ತಿರುವ ಯೋಜನೆ |
|---|---|---|---|---|---|---|
| 1 | ತುಮಕೂರು | ಮಧುಗಿರಿ | ಬಡವನಹಳ್ಳಿ | ನಾಗೇನಹಳ್ಳಿ | ನಾಗೇನಹಳ್ಳಿ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 2 | ತುಮಕೂರು | ಮಧುಗಿರಿ | ಬಿಜವರ | ಸೋಗೇನಹಳ್ಳಿ | ಗೊಲ್ಲರಹಟ್ಟಿ–2 | ಕು.ನೀ.ಸ. ಯೋಜನೆ |
| 3 | ತುಮಕೂರು | ಮಧುಗಿರಿ | ಬಿಜವರ | ಸೋಗೇನಹಳ್ಳಿ | ಗೊಲ್ಲರಹಟ್ಟಿ–1 | ಕು.ನೀ.ಸ. ಯೋಜನೆ |
| 4 | ತುಮಕೂರು | ಮಧುಗಿರಿ | ಬ್ರಹ್ಮಸಮುದ್ರ | ಬ್ರಹ್ಮಸಮುದ್ರ | ದಿಣ್ಣೆ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 5 | ತುಮಕೂರು | ಮಧುಗಿರಿ | ಬ್ರಹ್ಮಸಮುದ್ರ | ಬ್ರಹ್ಮಸಮುದ್ರ | ಹಳೆ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 6 | ತುಮಕೂರು | ಮಧುಗಿರಿ | ಚಂದ್ರಗಿರಿ | ಚಂದ್ರಗಿರಿ | ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 7 | ತುಮಕೂರು | ಮಧುಗಿರಿ | ದಬ್ಬೇಘಟ್ಟ | ವಜ್ರದಹಳ್ಳಿ | ವಜ್ರದಹಳ್ಳಿ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 8 | ತುಮಕೂರು | ಮಧುಗಿರಿ | ದೊಡ್ಡೇರಿ | ದೊಡ್ಡೇರಿ | ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 9 | ತುಮಕೂರು | ಮಧುಗಿರಿ | ಗಂಜಲಗುಂಟೆ | ಮಲ್ಲೇನಹಳ್ಳಿ | ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 10 | ತುಮಕೂರು | ಮಧುಗಿರಿ | ಗಂಜಲಗುಂಟೆ | ಮುದ್ದೇನ ಹಳ್ಳಿ | ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 11 | ತುಮಕೂರು | ಮಧುಗಿರಿ | ಗರಣಿ | ಗರಣಿ | ಹೊಸ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 12 | ತುಮಕೂರು | ಮಧುಗಿರಿ | ಗೊಂದಿಹಳ್ಳಿ | ತಿಮ್ಮಲಾಪುರ | ತಿಮ್ಮಲಾಪುರ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 13 | ತುಮಕೂರು | ಮಧುಗಿರಿ | ಹೊಸಕೆರೆ | ಅವರಗಲ್ಲು | ಅವರಗಲ್ಲು ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 14 | ತುಮಕೂರು | ಮಧುಗಿರಿ | ಹೊಸಕೆರೆ | ಬಸವನಹಳ್ಳಿ | ಬಸವನಹಳ್ಳಿ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 15 | ತುಮಕೂರು | ಮಧುಗಿರಿ | ಹೊಸಕೆರೆ | ಹೊಸಕೆರೆ | ಚಿಕ್ಕೆರೆ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 16 | ತುಮಕೂರು | ಮಧುಗಿರಿ | ಕೋಟಗಾರ್ಲಹಳ್ಳಿ | ಕೋಟಗಾರ್ಲಹಳ್ಳಿ | ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 17 | ತುಮಕೂರು | ಮಧುಗಿರಿ | ಕೋಟಗಾರ್ಲಹಳ್ಳಿ | ವಿಠಲಾಪುರ | ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 18 | ತುಮಕೂರು | ಮಧುಗಿರಿ | ನೇರಳೆಕೆರೆ | ನೇರಳೆಕೆರೆ | ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 19 | ತುಮಕೂರು | ಮಧುಗಿರಿ | ರಂಗಾಪುರ | ರಂಗಾಪುರ | ರಂಗಾಪುರ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 20 | ತುಮಕೂರು | ಮಧುಗಿರಿ | ರೆಡ್ಡಿಹಳ್ಳಿ | ಮಲ್ಲನಾಯ್ಕನಹಳ್ಳಿ | ಎಂ.ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 21 | ತುಮಕೂರು | ಮಧುಗಿರಿ | ರೆಡ್ಡಿಹಳ್ಳಿ | ಆರ್.ಗೊಲ್ಲಹಳ್ಳಿ | ದೊಡ್ಡ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 22 | ತುಮಕೂರು | ಮಧುಗಿರಿ | ರೆಡ್ಡಿಹಳ್ಳಿ | ರೆಡ್ಡಿಹಳ್ಳಿ | ಆರ್.ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 23 | ತುಮಕೂರು | ಮಧುಗಿರಿ | ಸಜ್ಜೆಹೊಸಹಳ್ಳಿ | ಕಾರ್ಪೇನಹಳ್ಳಿ | ಕಾರ್ಪೇನಹಳ್ಳಿ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 24 | ತುಮಕೂರು | ಮಧುಗಿರಿ | ಸಜ್ಜೆಹೊಸಹಳ್ಳಿ | ಶಿವನಗೆರೆ | ಶಿವನಗೆರೆ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 25 | ತುಮಕೂರು | ಮಧುಗಿರಿ | ಸಿದ್ದಾಪುರ | ಮರಿತಿಮ್ಮನಹಳ್ಳಿ | ಮರಿತಿಮ್ಮನಹಳ್ಳಿ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |
| 26 | ತುಮಕೂರು | ಮಧುಗಿರಿ | ಸಿದ್ದಾಪುರ | ಸಿದ್ದಾಪುರ | ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ |

CE
RDW & SD

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 689ರ ಉತ್ತರ

ಅನುಬಂಧ–2

ಮಾನ್ಯ ಶ್ರೀ ವೀರಭದ್ರಯ್ಯ.ಎಂ.ವಿ, ವಿಧಾನಸಭಾ ಸದಸ್ಯರು ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 689ಕ್ಕೆ ಉತ್ತರ.

| ಕ್ರ ಸಂ. | ಜಿಲ್ಲೆ | ತಾಲ್ಲೂಕು | ಗ್ರಾಮಪಂಚಾಯಿತಿ | ಗ್ರಾಮ | ಜನವಸತಿ | ಹಾಲಿ ಕುಡಿಯುವ ನೀರು ಸರಬರಾಜು ಮಾಡುತ್ತಿರುವ ಯೋಜನೆ | ಷರಾ |
|---|---|---|---|---|---|---|---|
| 3 | ತುಮಕೂರು | ಮಧುಗಿರಿ | ಬಿಜವರ | ಸೋಗೇನಹಳ್ಳಿ | ಗೊಲ್ಲರಹಟ್ಟಿ-1 | ಕು.ನೀ.ಸ. ಯೋಜನೆ | ಶುದ್ಧ ಕುಡಿಯುವ ನೀರಿನ ಘಟಕ ಕಾರ್ಯನಿರ್ವಹಿಸುತ್ತಿದೆ |
| 4 | ತುಮಕೂರು | ಮಧುಗಿರಿ | ಬ್ರಹ್ಮಸಮುದ್ರ | ಬ್ರಹ್ಮಸಮುದ್ರ | ದಿಣ್ಣೆ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ | ಶುದ್ಧ ಕುಡಿಯುವ ನೀರಿನ ಘಟಕ ಕಾರ್ಯನಿರ್ವಹಿಸುತ್ತಿದೆ |
| 5 | ತುಮಕೂರು | ಮಧುಗಿರಿ | ಬ್ರಹ್ಮಸಮುದ್ರ | ಬ್ರಹ್ಮಸಮುದ್ರ | ಹಳೆ ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ | ಶುದ್ಧ ಕುಡಿಯುವ ನೀರಿನ ಘಟಕ ಕಾರ್ಯನಿರ್ವಹಿಸುತ್ತಿದೆ |
| 6 | ತುಮಕೂರು | ಮಧುಗಿರಿ | ಚಂದ್ರಗಿರಿ | ಚಂದ್ರಗಿರಿ | ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ | ಶುದ್ಧ ಕುಡಿಯುವ ನೀರಿನ ಘಟಕ ಕಾರ್ಯನಿರ್ವಹಿಸುತ್ತಿದೆ |
| 13 | ತುಮಕೂರು | ಮಧುಗಿರಿ | ಹೊಸಕೆರೆ | ಅವರಗಲ್ಲು | ಅವರಗಲ್ಲು ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ | ಶುದ್ಧ ಕುಡಿಯುವ ನೀರಿನ ಘಟಕ ಕಾರ್ಯನಿರ್ವಹಿಸುತ್ತಿದೆ |
| 20 | ತುಮಕೂರು | ಮಧುಗಿರಿ | ರೆಡ್ಡಿಹಳ್ಳಿ | ಮಲ್ಲನಾಯ್ಕನಹಳ್ಳಿ | ಎಂ.ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ | ಶುದ್ಧ ಕುಡಿಯುವ ನೀರಿನ ಘಟಕ ಕಾರ್ಯನಿರ್ವಹಿಸುತ್ತಿದೆ |
| 22 | ತುಮಕೂರು | ಮಧುಗಿರಿ | ರೆಡ್ಡಿಹಳ್ಳಿ | ರೆಡ್ಡಿಹಳ್ಳಿ | ಆರ್.ಗೊಲ್ಲರಹಟ್ಟಿ | ಕು.ನೀ.ಸ. ಯೋಜನೆ | ಶುದ್ಧ ಕುಡಿಯುವ ನೀರಿನ ಘಟಕ ಕಾರ್ಯನಿರ್ವಹಿಸುತ್ತಿದೆ |

CE
RDW & SD



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 690

ಸದಸ್ಯರ ಹೆಸರು : ಶ್ರೀ ವೀರಭದ್ರಯ್ಯ ಎಂ.ವಿ. (ಮಧುಗಿರಿ)

ಉತ್ತರಿಸಬೇಕಾದ ದಿನಾಂಕ : 20-09-2022.

ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿ.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಮಧುಗಿರಿ ಕ್ಷೇತ್ರದ ವ್ಯಾಪ್ತಿಯಲ್ಲಿ ಹೆಚ್ಚಾಗಿ ಅಲ್ಪಸಂಖ್ಯಾತ ಜನಾಂಗದವರು ವಾಸವಾಗಿದ್ದು, ಈ ಕಾಲೋನಿಗಳಲ್ಲಿ ಸರಿಯಾದ ಮೂಲಭೂತ ಸೌಲಭ್ಯಗಳಿಲ್ಲದೆ ಇಲ್ಲಿನ ಸಾರ್ವಜನಿಕರಿಗೆ ತೊಂದರೆಯಾಗುತ್ತಿದ್ದು, ಕಳೆದ ಮೂರು ವರ್ಷಗಳಿಂದ ಯಾವುದೇ ಅನುದಾನ ಬಿಡುಗಡೆಯಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ. | ಬಂದಿದ್ದಲ್ಲಿ, ಈ ಕಾಲೋನಿಗಳ ಅಭಿವೃದ್ಧಿಗೆ ಅನುದಾನ ಮಂಜೂರು ಮಾಡಿ, ಮೂಲಭೂತ ಸೌಲಭ್ಯಗಳನ್ನು ಯಾವಾಗ ಒದಗಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | ರಾಜ್ಯದ 11 ಮಹಾನಗರ ಪಾಲಿಕೆಗಳ ವ್ಯಾಪ್ತಿಗೆ ಒಳಪಡುವ ಅಲ್ಪಸಂಖ್ಯಾತರು ಹೆಚ್ಚಾಗಿ ವಾಸಿಸುವ ಪ್ರದೇಶಗಳನ್ನು ಹೊರತುಪಡಿಸಿ, ಇನ್ನಿತರ ಅಲ್ಪಸಂಖ್ಯಾತರ ಕಾಲೋನಿಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಬಗ್ಗೆ ಪ್ರಸಕ್ತ ಸಾಲಿನಲ್ಲಿ ಯಾವುದೇ ಅನುದಾನ ಒದಗಿಸಿರುವುದಿಲ್ಲ. |

ಸಂಖ್ಯೆ: **MWD 246 LMQ 2022**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

(17)

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 691
2. ಸದಸ್ಯರ ಹೆಸರು : ಶ್ರೀ ಜಮೀರ್ ಅಹಮದ್ ಖಾನ್. ಬಿ.ಝಡ್
3. ಉತ್ತರಿಸುವ ದಿನಾಂಕ : 20-09-2022
4. ಉತ್ತರಿಸುವವರು : ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಹೆಚ್ಚು ಕೊಳಚೆ ಪ್ರದೇಶಗಳಿದ್ದು, ಬಿ.ಬಿ.ಎಂ.ಪಿ.ಗೆ ಸೇರಿದ ಕೊಳಚೆ ಪ್ರದೇಶದಲ್ಲಿ ಹಲವಾರು ಕುಟುಂಬಗಳು ಸುಮಾರು ವರ್ಷಗಳಿಂದ ವಾಸಿಸುತ್ತಿರುವ, ಕಡುಬಡವರಾಗಿರುವ ಇವರುಗಳಿಗೆ ಬಿ.ಬಿ.ಎಂ.ಪಿ ವತಿಯಿಂದ ಈವರೆಗೂ ಹಕ್ಕುಪತ್ರ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಯಾವಾಗ ನೀಡಲಾಗುವುದು? | ಬಂದಿದೆ.<br>ಚಾಮರಾಜಪೇಟೆ ವಿಧಾನಸಭಾ ವ್ಯಾಪ್ತಿಯಲ್ಲಿ ಈ ಕೆಳಕಂಡಂತೆ ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಿರುವ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ವಿತರಿಸಲಾಗಿರುತ್ತದೆ. |

| ಕ್ರ. ಸಂ. | ವಾರ್ಡ್ ಸಂಖ್ಯೆ | ಕೊಳಚೆ ಪ್ರದೇಶದ ವಿವರ | ಒಟ್ಟು ಫಲಾನುಭವಿಗಳ ಸಂಖ್ಯೆ | ಹಕ್ಕು ಪತ್ರ ವಿತರಿಸಿರುವ ಸಂಖ್ಯೆ | ಹಕ್ಕು ಪತ್ರ ವಿತರಿಸಲು ಬಾಕಿ ಇರುವ ಸಂಖ್ಯೆ | ಷರಾ |
|---|---|---|---|---|---|---|
| 1 | 135-ಪಾದರಾಯನಪುರ | ಯಾವುದು ಇರುವುದಿಲ್ಲ. | | | | |
| 2 | 136-ಜಗಜೀವನರಾಮನಗರ | 1. ಓಬಳೇಶ್ ಕಾಲೋನಿ<br>2. ಜನತಾ ಕಾಲೋನಿ | 514 | 503 | 11 | |
| 3 | 137-ರಾಯಪುರಂ | 1. ರೈಲ್ವೆ ಲೇನ್ ಅಂಚಿನಲ್ಲಿರುವ ಪ್ರದೇಶ<br>2. ವೆಂಕಟಸ್ವಾಮಿ ಗಾರ್ಡನ್<br>3. ರಾಯಪುರ | 65<br>185<br>176 | 65<br>185<br>176 | 0<br>0<br>0 | |
| 4 | 138-ಚಲವಾದಿಪಾಳ್ಯ | 1. ಭಂಗಿ ಕಾಲೋನಿ<br>2. ಫ್ಲವರ್ ಗಾರ್ಡನ್<br>3. ದೊರೆಸ್ವಾಮಿನಗರ | 382<br>276<br>85 | 258<br>221<br>70 | 124<br>55<br>15 | |
| 5 | 139-ಕೆ.ಆರ್.ಮಾರ್ಕೆಟ್ | 1. ಭಕ್ಷಿ ಗಾರ್ಡನ್ | 504 | 458 | 46 | |
| 6 | 140-ಚಾಮರಾಜಪೇಟೆ | ಯಾವುದು ಇರುವುದಿಲ್ಲ | | | | |
| 7 | 141-ಆಜಾದ್‌ನಗರ | ಬಂಡೆ ಗುಡಿಸಿಲಿನ ಮನೆಗಳು | 88 | 36 | 52 | |
| | ಒಟ್ಟು | | **2275** | **1972** | **303** | |

ಬಾಕಿ ಇರುವ ಮನೆಗಳಿಗೆ ಹಕ್ಕುಪತ್ರಗಳನ್ನು ನೀಡುವ ಬಗ್ಗೆ ನಿಯಮಾನುಸಾರ ಕ್ರಮವಹಿಸಲಾಗುತ್ತಿದೆ.

**ಸಂಖ್ಯೆ: ನಅಇ 183 ಬಿಬಿಎಲ್ 2022**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 692 |
| 2 | ಸದಸ್ಯರ ಹೆಸರು | : | ಶ್ರೀ ಜಮೀರ್ ಅಹಮದ್ ಖಾನ್ ಬಿ.ಝಡ್ (ಚಾಮರಾಜಪೇಟೆ) |
| 3 | ಉತ್ತರಿಸುವ ದಿನಾಂಕ | : | 20-09-2022 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬಿಬಿಎಂಪಿಯ ಕಲ್ಯಾಣ ಕಾರ್ಯಕ್ರಮದಡಿಯಲ್ಲಿ ಪದವಿ ಪೂರ್ವ, ಪದವಿ ಮತ್ತು ಸ್ನಾತಕೋತ್ತರ ಪದವಿಯಲ್ಲಿ ವ್ಯಾಸಂಗ ಮಾಡುತ್ತಿರುವ ಬಡ ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್‌ಟಾಪ್ ನೀಡುವ ಬಗ್ಗೆ ಕ್ರಮ ಕೈಗೊಳ್ಳಲಾಗಿದೆಯೇ? | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಕಲ್ಯಾಣ ಕಾರ್ಯಕ್ರಮಗಳಡಿಯಲ್ಲಿ ಪದವಿ ಪೂರ್ವ, ಪದವಿ ಮತ್ತು ಸ್ನಾತಕೋತ್ತರ ಪದವಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್‌ಟಾಪ್ ವಿತರಿಸುವ ಕಾರ್ಯಕ್ರಮದ ಅನುಷ್ಠಾನ ಮಾರ್ಗಸೂಚಿಗಳನ್ನು ಬಿಬಿಎಂಪಿ ವತಿಯಿಂದ ಹೊರಡಿಸಲಾಗಿರುತ್ತದೆ. **ಮಾರ್ಗಸೂಚಿಯ ಪ್ರತಿಯನ್ನು ಅನುಬಂಧ-1 ರಲ್ಲಿ ನೀಡಿದೆ.**<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಪಾಲಿಕೆಯ ಕಲ್ಯಾಣ ಕಾರ್ಯಕ್ರಮಗಳಡಿಯಲ್ಲಿ ಪದವಿ ಪೂರ್ವ, ಪದವಿ ಮತ್ತು ಸ್ನಾತಕೋತ್ತರ ಪದವಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಅನುಕೂಲವಾಗಲು ಉಚಿತ ಲ್ಯಾಪ್‌ಟಾಪ್ ವಿತರಿಸಲು ಆನ್‌ಲೈನ್ ಮುಖಾಂತರ ಬಿಬಿಎಂಪಿ ವತಿಯಿಂದ ಅರ್ಜಿಗಳನ್ನು ಆಹ್ವಾನಿಸಲಾಗಿರುತ್ತದೆ. **ಪ್ರತಿಯನ್ನು ಅನುಬಂಧ-2 ರಲ್ಲಿ ನೀಡಿದೆ.** |

ನಅಇ 433 ಎಂಎನ್‌ಯು 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

ಅನುಬಂಧ - 1

ಮುಖ್ಯ ಆಯುಕ್ತರು
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ



ಕೇಂದ್ರ ಕಛೇರಿ
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ
ಹಡ್ಸನ್ ವೃತ್ತ, ಬೆಂಗಳೂರು-560 002

ಸಂಖ್ಯೆ: ಕಅ(ಕೇಂ)/ಪಿಆರ್/1270/2019-20 ದಿನಾಂಕ:- .07.2022
02-08-2022

# ಪದವಿ ಪೂರ್ವ, ಪದವಿ ಮತ್ತು ಸ್ನಾತಕೋತ್ತರ ವಿದ್ಯಾಭ್ಯಾಸ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್‌ಟಾಪ್ ವಿತರಿಸುವ ಕಾರ್ಯಕ್ರಮದ ಅನುಷ್ಠಾನ ಮಾರ್ಗಸೂಚಿ

**ಉದ್ದೇಶ:-**

ಪಾಲಿಕೆಯ ವ್ಯಾಪ್ತಿಯಲ್ಲಿನ ವಾಸವಿರುವ ಪದವಿ ಪೂರ್ವ, ಪದವಿ ಮತ್ತು ಸ್ನಾತಕೋತ್ತರ ವ್ಯಾಸಂಗಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸಕ್ಕಾಗಿ ಹೆಚ್ಚು ಅನುಕೂಲವಾಗುವ ಹಿತದೃಷ್ಟಿಯಿಂದ ಎಲ್ಲಾ ವರ್ಗದ, ಮಹಿಳೆಯರು, ಪೌರಕಾರ್ಮಿಕರು, ಮ್ಯಾನ್ಯುಯಲ್ ಸ್ಕ್ಯಾವೆಂಜರ್ಸ್‌ರವರ ಅವಲಂಬಿತ, ವಿಶೇಷ ಚೇತನರು ಮತ್ತು ಅಂಧ ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್‌ಟಾಪ್‌ಗಳನ್ನು ನೀಡುವ ಸದುದ್ದೇಶವಾಗಿರುತ್ತದೆ.

ಅರ್ಹತೆ ಹಾಗು ಷರತ್ತುಗಳು:-

1. ವಿದ್ಯಾರ್ಥಿಗಳು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ವಾಸಿಸುತ್ತಿರಬೇಕು.
2. ಪಾಲಿಕೆ ವ್ಯಾಪ್ತಿಯಲ್ಲಿ ಕನಿಷ್ಠ 3 ವರ್ಷಗಳಿಂದ ವಾಸಿಸುತ್ತಿರುವ ವಿದ್ಯಾರ್ಥಿಗಳು ಅರ್ಜಿಯನ್ನು ಆನ್‌ಲೈನ್ ಮುಖಾಂತರ ಸಲ್ಲಿಸಬೇಕು.
3. ಅರ್ಜಿದಾರರು ಸರ್ಕಾರದಿಂದ ನೀಡಲಾಗಿರುವ ಗುರುತಿನ ಚೀಟಿಯ ಪ್ರತಿಯನ್ನು ಕಡ್ಡಾಯವಾಗಿ ನೀಡತಕ್ಕದ್ದು (ಆಧಾರ್ ಕಾರ್ಡ್/ ಮತದಾರರ ಗುರುತಿನ ಚಿಟಿ, ಪಡಿತರ ಚೀಟಿ/ಲೈಟ್ ಬಿಲ್, ಗ್ಯಾಸ್ ಬಿಲ್)
4. ವ್ಯಾಸಂಗ ಮಾಡುತ್ತಿರುವ ಬಗ್ಗೆ ಕಾಲೇಜಿನಿಂದ ನೀಡಲಾಗುವ ಗುರುತಿನ ಚೀಟಿ ಮತ್ತು ವ್ಯಾಸಂಗ ಪ್ರಮಾಣ ಪತ್ರವನ್ನು ನೀಡುವುದು.
5. ಎಲ್ಲಾ ವರ್ಗದ ವರ್ಗದ ವಿದ್ಯಾರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ. 3.00 ಲಕ್ಷಗಳನ್ನು ಮೀರಬಾರದು.
6. ಪಾಲಿಕೆ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ವಿಶೇಷ ಚೇತನದ ವರ್ಗದ ವಿದ್ಯಾರ್ಥಿ/ವಿದ್ಯಾರ್ಥಿನಿಯರು ರವರು ಸದರಿ ಸೌಲಭ್ಯವನ್ನು ಪಡೆಯಲು ಕುಟುಂಬದ ವಾರ್ಷಿಕ ಆದಾಯ ರೂ. 2.50 ಲಕ್ಷಗಳನ್ನು ಮೀರಿರಬಾರದು.
7. ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ವಿತರಣಾ ಕಾರ್ಯಕ್ರಮದಡಿ ಅರ್ಜಿ ಸಲ್ಲಿಸುವ ವಿದ್ಯಾರ್ಥಿಗಳು ಕನಿಷ್ಠ ಶೇ.50ರಷ್ಟು ದೃಷ್ಟಿದೋಷವನ್ನು ಹೊಂದಿರಬೇಕು.
8. ವಿಶೇಷ ಚೇತನರ ಯು.ಡಿ.ಐ.ಡಿ ಸಂಖ್ಯೆಯನ್ನು ಹೊಂದಿರತಕ್ಕದ್ದು.

-2

೯. ಪಾಲಿಕೆಯ ಪೌರಕಾರ್ಮಿಕರ ಮಕ್ಕಳಾಗಿದ್ದಲ್ಲಿ ತಂದೆ ತಾಯಿಯ ಗುರುತಿನ ಚೀಟಿ, ವೇತನ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕು ಹಾಗು ಸದರಿ ನೌಕರರ ಮಕ್ಕಳಿಗೆ ಆದಾಯ ಮಿತಿ ಅನ್ವಯಿಸುವುದಿಲ್ಲ.

10. ಈ ಹಿಂದೆ ಸರ್ಕಾರ, ಸರ್ಕಾರದ ಸಂಸ್ಥೆಗಳು ಹಾಗೂ ಸರ್ಕಾರಿ ಸ್ವಾಮ್ಯದ ನಿಗಮ ಮಂಡಳಿಗಳಿಂದ ಲ್ಯಾಪ್ ಟಾಪ್‌ಗಳನ್ನು ಉಚಿತವಾಗಿ ಪಡೆದಿರುವವರು ಅರ್ಜಿಸಲ್ಲಿಸಲು ಅರ್ಹರಿರುವುದಿಲ್ಲ.

11. ಈ ಹಿಂದೆ ಇತರೆ ಸರ್ಕಾರಿ, ಸರ್ಕಾರೇತರ ಸಂಘ ಸಂಸ್ಥೆಗಳಿಂದ ಲ್ಯಾಪ್ ಟಾಪ್ ಪಡೆದಿಲ್ಲದಿರುವ ಬಗ್ಗೆ, ವಾರ್ಷಿಕ ಆದಾಯ, ವಾಸ ವಿಳಾಸದ ಬಗ್ಗೆ ರೂ. 20/- ಮುಖ ಬೆಲೆಯ ಛಾಪಾಕಾಗದದಲ್ಲಿ ದೃಢೀಕರಣವನ್ನು ನೀಡಬೇಕು.

ಆಯ್ಕೆ ವಿಧಾನ:-

1. ಆನ್‌ಲೈನ್ ಮುಖಾಂತರ ಸಲ್ಲಿಸಲಾಗಿರುವ ಅರ್ಜಿ ಮತ್ತು ದಾಖಲೆಗಳನ್ನು ಸಹಾಯಕ ಕಂದಾಯ ಅಧಿಕಾರಿ(ಕಲ್ಯಾಣ) ರವರು ಪರಿಶೀಲಿಸಿ ಅರ್ಹ ಅರ್ಜಿಗಳ ಪಟ್ಟಿಯನ್ನು ಸಿದ್ಧಪಡಿಸಲಾಗುವುದು.
2. ಒಟ್ಟಾರೆ ಗುರಿಯಲ್ಲಿ ಶೇ. 50ರಷ್ಟು ಮಹಿಳಾ ವಿದ್ಯಾರ್ಥಿಗಳಿಗೆ ಮೀಸಲಿರಿಸಲಾಗುವುದು.
3. ಪಾಲಿಕೆಯ ಮತ್ತು ಸರ್ಕಾರಿ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಮೊದಲ ಆದ್ಯತೆಯನ್ನು ನೀಡಲಾಗುವುದು.
4. ಸಹಾಯ ಕಂದಾಯ ಅಧಿಕಾರಿ (ಕಲ್ಯಾಣ)ರವರು ಸಿದ್ಧಪಡಿಸಿರುವ ಪಟ್ಟಿಯನ್ನು ವಾರ್ಡ್‌ಸಮಿತಿಯ ಅನುಮೋದನೆಗೆ ಅರ್ಜಿಗಳ ಸಮೇತ ಮಂಡಿಸುವುದು.
5. ವಾರ್ಡ್ ಸಮಿತಿಯಲ್ಲಿ ವಾರ್ಡ್‌ಗೆ ಮೀಸಲಿರಿಸಿರುವ ಗುರಿಗೆ ಅನುಗುಣವಾಗಿ ಲಾಟರಿ ಮುಖಾಂತರ ಅರ್ಜಿಗಳನ್ನು ಆಯ್ಕೆ ಮಾಡಿ ಅನುಮೋದನೆ ನೀಡುವುದು.
6. ಒಂದುವೇಳೆ ಹೆಚ್ಚಿನ ಬೇಡಿಕೆ ಬಂದಲ್ಲಿ ಶೇ.100ರಷ್ಟು ದೃಷ್ಟಿದೋಷ ವಿರುವವರಿಗೆ ಮೊದಲ ಆಧ್ಯತೆಯನ್ನು ನೀಡಲಾಗುವುದು.

ಅನುಷ್ಠಾನ:-

ಅನುಮೋದನೆ ನೀಡಿರುವಂತಹ ಅರ್ಜಿಗಳಿಗೆ ವಲಯ ಸಹಾಯಕ ಕಂದಾಯ ಅಧಿಕಾರಿ (ಕಲ್ಯಾಣ) ರವರು ವಿತರಿಸಿ, ವಿತರಿಸಿರುವ ಬಗ್ಗೆ ಬಯೋಮೆಟ್ರಿಕ್ / ಅಗತ್ಯ ದಾಖಲೆಗಳನ್ನು ಪಡೆದು ದಾಖಲಿಸಿಕೊಳ್ಳುವುದು.

-3

ಮೇಲ್ಕಂಡ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟು ವಲಯ ಹಂತದಲ್ಲಿ ಪಾಲಿಕೆಯ ಕಲ್ಯಾಣ ಕಾರ್ಯಕ್ರಮಗಳಡಿ ಲ್ಯಾಪ್‌ಟಾಪ್ ವಿತರಿಸಿರುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಸೂಚಿಸಿದೆ.

2.9.22

ಮುಖ್ಯ ಆಯುಕ್ತರು
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

ಪ್ರತಿಯನ್ನು

1. ಮಾನ್ಯ ಆಡಳಿತಗಾರರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ
2. ಎಲ್ಲಾ ವಲಯಗಳ ವಲಯ ಆಯುಕ್ತರು
3. ವಿಶೇಷ ಆಯುಕ್ತರು (ಹಣಕಾಸು) / (ಕಲ್ಯಾಣ)
4. ಎಲ್ಲಾ ವಲಯಗಳ ಜಂಟಿ ಆಯುಕ್ತರು
5. ಎಲ್ಲಾ ವಲಯಗಳ ಉಪ ಆಯುಕ್ತರು
6. ಎಲ್ಲಾ ವಲಯಗಳ ಸಹಾಯಕ ಕಂದಾಯ ಅಧಿಕಾರಿ (ಕಲ್ಯಾಣ)
7. ಕಛೇರಿ ಪ್ರತಿ.

ಅನುಬಂಧ 2

ವಿಶೇಷ ಆಯುಕ್ತರು (ಕಲ್ಯಾಣ)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ



ಕೇಂದ್ರ ಕಛೇರಿ
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ
ಹಡ್ಸನ್ ವೃತ್ತ, ಬೆಂಗಳೂರು-560 002

ಸಂಖ್ಯೆ: ಸ.ಆ(ಕ)/ಪಿಆರ್/772/2022-23

ದಿನಾಂಕ: 18 -08-2022

## ಸಾರ್ವಜನಿಕ ಪತ್ರಿಕಾ ಪ್ರಕಟಣೆ

ವಿಷಯ: ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಕಲ್ಯಾಣ ಕಾರ್ಯಕ್ರಮಗಳಡಿ ಆನ್‌ಲೈನ್ ಮುಖಾಂತರ ಅರ್ಜಿಗಳನ್ನು ಆಹ್ವಾನಿಸುತ್ತಿರುವ ಬಗ್ಗೆ.

*-*-*-*-*-*

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಕಲ್ಯಾಣ ಕಾರ್ಯಕ್ರಮಗಳಡಿಯಲ್ಲಿ ಈ ಕೆಳಕಂಡ ಕಾರ್ಯಕ್ರಮಗಳಿಗೆ ಆನ್‌ಲೈನ್ ಮುಖಾಂತರ ಅರ್ಜಿಗಳನ್ನು ಆಹ್ವಾನಿಸಲಾಗುತ್ತಿದೆ.

1. ಪಾಲಿಕೆಯ ವ್ಯಾಪ್ತಿಯಲ್ಲಿ ಸ್ವಂತ ನಿವೇಶನ ಹೊಂದಿರುವವರಿಗೆ ಮನೆ ನಿರ್ಮಾಣ ಮಾಡಿಕೊಳ್ಳಲು ರೂ.5.00ಲಕ್ಷಗಳ ಸಹಾಯಧನ
2. ಪದವಿ ಪೂರ್ವ, ಪದವಿ ಹಾಗೂ ಸ್ನಾತಕೊತ್ತರ ಪದವಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವ್ಯಾಸಂಗಕ್ಕೆ ಅನುಕೂಲವಾಗಲು ಉಚಿತ ಲ್ಯಾಪ್‌ಟಾಪ್
3. ಅಂಧರಿಗೆ ಸ್ಮಾರ್ಟ್ ಸ್ಟಿಕ್
4. ಅಂಧ ವಿದ್ಯಾರ್ಥಿಗಳಿಗೆ ಎಜುಕೇಷನಲ್ ಲ್ಯಾಪ್‌ಟಾಪ್
5. ಹಿರಿಯ ನಾಗರೀಕರಿಗೆ ಮಡಚುಬಹುದಾದ ವೀಲ್ ಚೇರ್

**ಸೂಚನೆ:-**

- ಮೇಲ್ಕಂಡ ಕಾರ್ಯಕ್ರಮಗಳಡಿ ಅರ್ಜಿ ಸಲ್ಲಿಸಲು ಆಸಕ್ತರು ಪಾಲಿಕೆಯ ವೆಬ್ ಜಾಲತಾಣವಾದ https://accounts.bbmpgov.in/welfare ಮುಖಾಂತರ ಅಥವಾ ಬೆಂಗಳೂರು ಒನ್ ಕೇಂದ್ರಗಳಲ್ಲಿ ರೂ. 30/-ಗಳನ್ನು ಪಾವತಿಸಿ ಅರ್ಜಿ ಸಲ್ಲಿಸಬಹುದು.
- ಅರ್ಜಿದಾರರ ಅರ್ಹತೆಗಳ ಬಗ್ಗೆ ಪಾಲಿಕೆಯ ಅಂತರ್ಜಾಲದಲ್ಲಿ ಮಾರ್ಗಸೂಚಿಗಳನ್ನು ಅಳವಡಿಸಲಾಗಿರುತ್ತದೆ.
- ಹೆಚ್ಚಿನ ಮಾಹಿತಿಗೆ ತಮ್ಮ ವ್ಯಾಪ್ತಿಯ ಪಾಲಿಕೆಯ ವಲಯ ಕಛೇರಿಯ ಸಹಾಯಕ ಕಂದಾಯ ಅಧಿಕಾರಿ (ಕಲ್ಯಾಣ) ರವರನ್ನು ಸಂಪರ್ಕಿಸುವುದು.
- ದಿನಾಂಕ: 20 -08-2022 ರಿಂದ ದಿನಾಂಕ: 19 -09-2022 ರವರೆಗೆ ಅರ್ಜಿಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ.
- ತಾಂತ್ರಿಕ ಸಮಸ್ಯೆಗಳಿಗೆ ಸಂಪರ್ಕಿಸಿ :
  - ಶ್ರೀಮತಿ. ಗೀತ. - 9880197998
  - ಶ್ರೀ. ಆದರ್ಶ - 9845763451

ವಿಶೇಷ ಆಯುಕ್ತರು (ಕಲ್ಯಾಣ)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

(೨೫)

## ಕರ್ನಾಟಕ ವಿಧಾನ ಸಭೆ

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 693
2 ಸದಸ್ಯರ ಹೆಸರು : ಶ್ರೀ ಜಮೀರ್ ಅಹಮದ್ ಖಾನ್ ಬಿ.ಝಡ್. (ಚಾಮರಾಜಪೇಟೆ)
3 ಉತ್ತರಿಸುವ ದಿನಾಂಕ : 20-09-2022
4 ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕುಡಿಯುವ ನೀರಿನ ಸಮಸ್ಯೆಯಿದ್ದು, ಈ ಹಿಂದೆ ಬಿ.ಬಿ.ಎಂ.ಪಿ ಹಾಗೂ ಸರ್ಕಾರದ ವತಿಯಿಂದ ಸುಮಾರು 200 ಕೊಳವೆ ಬಾವಿಗಳನ್ನು ಕೊರೆಯಲಾಗಿದ್ದು, ಸದರಿ ಕೊಳವೆ ಬಾವಿಗಳು ನಿರ್ವಹಣೆ ಮಾಡದೇ ಸಂಪೂರ್ಣ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ವಾರ್ಡ್ ಸಂಖ್ಯೆ: 135, 136, 137, 138, 139, 140, 141 ಗಳಲ್ಲಿ ಬಿಬಿಎಂಪಿ ಮತ್ತು ಸರ್ಕಾರದ ವತಿಯಿಂದ ಸುಮಾರು 188 ಕೊಳವೆಬಾವಿಗಳನ್ನು ಕೊರೆಯಲಾಗಿದ್ದು, ಸದರಿ ಕೊಳವೆ ಬಾವಿಗಳನ್ನು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ ಸುಸ್ಥಿತಿಯಲ್ಲಿರುವಂತೆ ನಿರ್ವಹಣೆ ಮಾಡಲಾಗುತ್ತಿರುತ್ತದೆ. |
| ಆ) | ಹಾಗಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು? | |

**ಸಂಖ್ಯೆ: ನಅಇ 761 ಎಂಎನ್‌ವೈ 2022 (ಇ)**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

(18)

50 Copies

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 694
2. ಸದಸ್ಯರ ಹೆಸರು : ಶ್ರೀ ಜಮೀರ್ ಅಹಮದ್ ಖಾನ್ .ಬಿ.ಝಡ್
3. ಉತ್ತರಿಸುವ ದಿನಾಂಕ : 20-09-2022
4. ಉತ್ತರಿಸುವವರು : ಮುಖ್ಯಮಂತ್ರಿಯವರು

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಪ್ರಸ್ತುತ ಸುರಿದ ಮಳೆಯಿಂದ ಹೆಚ್ಚು ಮನೆಗಳು ಬಿದ್ದುಹೋಗಿದ್ದು, ಸುಮಾರು ಕುಟುಂಬಗಳು ಬೀದಿಗೆ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿದೆ.<br><br>ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಪ್ರಸ್ತುತ ಸುರಿದ ಮಳೆಯಿಂದ ಬಿದ್ದುಹೋಗಿರುವ ಮನೆಗಳು ಹಾಗೂ ಮಳೆಯಿಂದ ಹಾನಿಗೊಳಗಾಗದ ಮನೆಗಳ ವಿವರಗಳು ಈ ಕೆಳಕಂಡಂತೆ ಇರುತ್ತದೆ.
<table>
<tr><th>ಕ್ರ.ಸಂ.</th><th>ಉಪ ವಿಭಾಗ</th><th>ವಾರ್ಡ್ ಮರು ವಿಂಗಡಣೆ-2022ರ ಮುಂಚೆ ಇದ್ದ ವಾರ್ಡ್ ಸಂಖ್ಯೆ</th><th>ಮಳೆಯಿಂದ ಹಾನಿ ಗೊಳಗಾದ ಮನೆಗಳ ವಿವರ</th><th>ಮನೆಗಳು ಬಿದ್ದು ಹೋಗಿರುವ ವಿವರ</th></tr>
<tr><td rowspan="4">1</td><td rowspan="4">ಜೆಜೆಆರ್ ನಗರ</td><td>135</td><td>22</td><td>0</td></tr>
<tr><td>136</td><td>9</td><td>0</td></tr>
<tr><td>137</td><td>9</td><td>0</td></tr>
<tr><td>138</td><td>64</td><td>7</td></tr>
<tr><td rowspan="4">2</td><td rowspan="4">ಚಾಮರಾಜಪೇಟೆ</td><td>139</td><td>33</td><td>2</td></tr>
<tr><td>140</td><td>0</td><td>3</td></tr>
<tr><td>141</td><td>25</td><td>1</td></tr>
<tr><td>ಒಟ್ಟು</td><td>**162**</td><td>**13**</td></tr>
</table></td></tr>
<tr><td>ಆ</td><td>ಬಂದಿದ್ದಲ್ಲಿ, ಸುರಿದ ಮಳೆಯಿಂದ ಕ್ಷೇತ್ರದಲ್ಲಿ ಮನೆ ಕಳೆದುಕೊಂಡವರಿಗೆ ಬಿ.ಬಿ.ಎಂ.ಪಿ ವತಿಯಿಂದ ಪರಿಹಾರ ನೀಡುವ ಬಗ್ಗೆ ಸರ್ಕಾರ ಕ್ರಮ ಕೈಗೊಳ್ಳುವುದೇ?</td><td>ಪರಿಹಾರ ನೀಡುವ ಬಗ್ಗೆ ನಿಯಮಾನುಸಾರ ಕ್ರಮವಹಿಸಲಾಗುತ್ತಿದೆ.</td></tr>
</table>

**ಸಂಖ್ಯೆ: ನಅಇ 182 ಬಿಬಿಎಲ್ 2022**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ.

6)

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 695
2. ಸದಸ್ಯರ ಹೆಸರು : ಶ್ರೀ ಜಮೀರ್ ಅಹಮದ್ ಖಾನ್ ಬಿ.ಝಡ್
3. ಉತ್ತರಿಸುವ ದಿನಾಂಕ : 20-09-2022
4. ಉತ್ತರಿಸುವವರು : ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕೋವಿಡ್-19ರಿಂದ ಹೆಚ್ಚು ಮಂದಿ ಮರಣ ಹೊಂದಿದ್ದು, ಮೃತಪಟ್ಟವರ ಹಲವು ಕುಟುಂಬಗಳಿಗೆ ಪರಿಹಾರ ನೀಡುವುದು ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಾಮರಾಜಪೇಟೆ ವಲಯದಲ್ಲಿ ಕೋವಿಡ್-19ರಿಂದ ಮರಣ ಹೊಂದಿದ ಪ್ರಕರಣಗಳಲ್ಲಿ 290 ಜನರಿಂದ ಪರಿಹಾರ ಕೋರಿ ಅರ್ಜಿಗಳು ಸ್ವೀಕೃತವಾಗಿರುತ್ತದೆ. ಈ ಪೈಕಿ, ಸಕಾರದ ಆದೇಶ ಸಂಖ್ಯೆ: ಕಂಇ 400 ಟಿಎನ್ಆರ್ 2021, ದಿನಾಂಕ 10-01-2021ರ ಮಾರ್ಗಸೂಚಿಗಳ ಪ್ರಕಾರ 288 ಅರ್ಜಿದಾರರಿಗೆ ತಲಾ ರೂ. 50,000/-ಗಳ ಪರಿಹಾರ ಮೊತ್ತವನ್ನು ಅರ್ಜಿದಾರರ ಬ್ಯಾಂಕ್ ಖಾತೆಗೆ ನೇರವಾಗಿ ಜಮಾ ಮಾಡಲಾಗಿದೆ. ಉಳಿದ ಇಬ್ಬರು ಅರ್ಜಿದಾರರ ಅರ್ಜಿಗಳು ಪರಿಶೀಲನಾ ಹಂತದಲ್ಲಿದ್ದು, ಸೂಕ್ತ ಕ್ರಮವಹಿಸಲಾಗುವುದು.<br><br>ಸರ್ಕಾರದ ಆದೇಶ ಸಂಖ್ಯೆ: ಕಂಇ 400 ಟಿಎನ್ಆರ್ 2021, ದಿನಾಂಕ:10-01-2021ರ ತಿದ್ದುಪಡಿ ಮಾರ್ಗ ಸೂಚಿಯಂತೆ ಬಿಪಿಎಲ್ ಪಡಿತರ ಚೀಟಿ ಹೊಂದಿರುವವರು ರೂ.1.00 ಲಕ್ಷವನ್ನು ಪಡೆಯಲು ಅರ್ಹರಾಗಿದ್ದು, 290 ಅರ್ಜಿದಾರರಲ್ಲಿ 77 ಬಿಪಿಎಲ್ ಪಡಿತರ ಚೀಟಿ ಹೊಂದಿದಿರುವ ಅರ್ಜಿದಾರರ ಪೈಕಿ 59 ಅರ್ಜಿದಾರರಿಗೆ ತಲಾ ರೂ. 1.00 ಲಕ್ಷಗಳಂತೆ ಒಟ್ಟಾರೆ ರೂ.59.00 ಲಕ್ಷಗಳ ಮೊತ್ತದ ಚೆಕ್‌ಗಳನ್ನು ವಿತರಿಸಲಾಗಿದೆ. ಉಳಿಕೆ 18 ಬಿಪಿಎಲ್ ಪಡಿತರ ಚೀಟಿ ಹೊಂದಿರುವ ಅರ್ಜಿದಾರರ ಅರ್ಜಿಗಳು ಪರಿಶೀಲನಾ ಹಂತದಲ್ಲಿದ್ದು, ಸೂಕ್ತ ಕ್ರಮ ವಹಿಸಲಾಗುವುದು. |
| ಆ | ಕುಟುಂಬಗಳಿಗೆ ಬಾಕಿ ಪರಿಹಾರ ನೀಡಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಬಾಕಿ ಉಳಿದ ಅರ್ಜಿದಾರರಿಗೆ ಅನುದಾನ ಲಭ್ಯತೆಯನುಸಾರ ಹಣ ಪಾವತಿಸಲು ಕ್ರಮವಹಿಸ ಲಾಗುವುದು. |

ಸಂಖ್ಯೆ: ನಅಇ 180 ಬಿಬಿಎಲ್ 2022(ಇ)

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕುಮಾರ ಬಂಗಾರಪ್ಪ.ಎಸ್.(ಸೊರಬ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 696 |
| ಉತ್ತರಿಸಬೇಕಾದ ದಿನಾಂಕ | : | 20.09.2022 |
| ಉತ್ತರಿಸುವ ಸಚಿವರು | : | ಮುಖ್ಯ ಮಂತ್ರಿಗಳು |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಲ್ಲಿ ಇಂಜಿನಿಯರ್‌ಗಳ ತೀವ್ರ ಕೊರತೆಯಿಂದ ಸರ್ಕಾರದ ಗ್ರಾಮೀಣ ಪ್ರದೇಶದ ವಿವಿಧ ಕಾಮಗಾರಿಗಳು ಸೂಕ್ತ ಸಮಯದಲ್ಲಿ ಅನುಷ್ಠಾನಗೊಳ್ಳಲು ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಪಂ.ರಾ.ಇಂ. ಉಪವಿಭಾಗ, ಸೊರಬ ಕಛೇರಿಗೆ ಮಂಜೂರಾದ / ಕರ್ತವ್ಯ ನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಇಂಜಿನಿಯರ್ ಹುದ್ದೆಗಳ ವಿವರಗಳು ಈ ಕೆಳಕಂಡಂತಿವೆ;
<table>
<tr><th>ಹುದ್ದೆಯ ಹೆಸರು</th><th>ಮಂಜೂರಾದ ಹುದ್ದೆ</th><th>ಕಾರ್ಯನಿರತ ಹುದ್ದೆ</th><th>ಖಾಲಿ ಹುದ್ದೆ</th></tr>
<tr><td>ಸ.ಕಾ.ಇಂ.</td><td>01</td><td>01</td><td>00</td></tr>
<tr><td>ಸಹಾಯಕ ಇಂಜಿನಿಯರ್</td><td>01</td><td>00</td><td>01</td></tr>
<tr><td>ಕಿರಿಯ ಇಂಜಿನಿಯರ್</td><td>03</td><td>02</td><td>01</td></tr>
</table></td></tr>
<tr><td>ಆ)</td><td>ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿ ಶಾಸಕರ ಕ್ಷೇತ್ರಾಭಿವೃದ್ಧಿ, ಮಳೆಹಾನಿ, MADB, ಕುಡಿಯುವ ನೀರು, ಟಾಸ್ಕ್ ಫೋರ್ಸ್ ಇತ್ಯಾದಿ ಕಾಮಗಾರಿಗಳನ್ನು ಕೇವಲ ಇಬ್ಬರು ಇಂಜಿನಿಯರ್‌ಗಳು ಅನುಷ್ಠಾನ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td rowspan="2">ಪಂ.ರಾ.ಇಂ. ಉಪವಿಭಾಗ, ಸೊರಬ ಕಛೇರಿಯಲ್ಲಿ ಮೇಲ್ಕಂಡಂತೆ ಒಟ್ಟು 03 ಜನ ಇಂಜಿನಿಯರ್‌ಗಳು ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿಯವರುಗಳು ಉಪವಿಭಾಗದ ವ್ಯಾಪ್ತಿಗೆ ನಿಗದಿಪಡಿಸಿರುವ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದೆ.</td></tr>
<tr><td>ಇ)</td><td>ಬಂದಿದ್ದಲ್ಲಿ, ಸದರಿ ಸಮಸ್ಯೆಯನ್ನು ಪರಿಹರಿಸಲು ಸರ್ಕಾರ ಯಾವ ರೀತಿಯ ಕ್ರಮಗಳನ್ನು ತೆಗೆದುಕೊಂಡಿದೆ?</td></tr>
</table>

**ಗ್ರಾಅಪ 156 ಜಿಪಅ 2022**

**(ಬಸವರಾಜ ಬೊಮ್ಮಾಯಿ)**
ಮುಖ್ಯ ಮಂತ್ರಿ

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 698
ಸದಸ್ಯರ ಹೆಸರು : ಶ್ರೀ ಕುಮಾರ್ ಬಂಗಾರಪ್ಪ ಎಸ್. (ಸೊರಬ)
ಉತ್ತರಿಸುವ ದಿನಾಂಕ : 20.09.2022
ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| 1 | ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕು ಹಾಗೂ ಕ್ಷೇತ್ರದ ತಾಳಗುಪ್ಪ ಹೋಬಳಿಯಲ್ಲಿ ಮಂಜೂರಾತಿಯಾಗಿರುವ ನೂರಾರು ಕೋಟಿ ರೂಪಾಯಿ ಮೊತ್ತದ ನೀರಾವರಿ, ರಸ್ತೆ ಹಾಗೂ ಸಮುದಾಯ ಭವನದ ಕಾಮಗಾರಿಗಳು ಒಂದಲ್ಲ ಒಂದು ಕಾರಣದಿಂದ ಅನುಷ್ಠಾನ ಮಾಡುವಲ್ಲಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ ಪ್ರಸ್ತುತ ಆರ್ಥಿಕ ವರ್ಷದಲ್ಲಿ ಅನುದಾನ ಹಂಚಿಕೆಗೆ ಕ್ರಮ ಕೈಗೊಳ್ಳಲಾಗಿದೆಯೇ? | ಸೊರಬ ವಿಧಾನಸಭಾ ಕ್ಷೇತ್ರದ ತಾಳಗುಪ್ಪ ಹೋಬಳಿಯ ವ್ಯಾಪ್ತಿಯಲ್ಲಿ ಕೈಗೊಳ್ಳಲಾಗಿರುವ ರಸ್ತೆ ಕಾಮಗಾರಿಗಳ ಹಾಗೂ ಸಮುದಾಯ ಭವನದ ಕಾಮಗಾರಿಗಳ ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ.<br><br>ಬಾಕಿ ಉಳಿದಿರುವ ಕಾಮಗಾರಿಗಳಿಗೆ ಅನುದಾನಕ್ಕನುಗುಣವಾಗಿ ಟೆಂಡರ್ ಪ್ರಕ್ರಿಯೆ ಪೂರ್ಣಗೊಳಿಸಿ, ಕಾಮಗಾರಿಗಳನ್ನು ಪ್ರಾರಂಭಿಸಲು ಕ್ರಮ ಜರುಗಿಸಲಾಗುವುದು. |
| 2 | ಮಂಜೂರಾತಿಯಾಗಿರುವ ಸದರಿ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಿ ಅನುಷ್ಠಾನ ಮಾಡಲು ಸರ್ಕಾರ ಇದುವರೆಗೆ ಯಾವ ರೀತಿಯ ಕ್ರಮಗಳನ್ನು ತೆಗೆದುಕೊಂಡಿದೆ? | |
| 3 | ಪ್ರಸ್ತುತ ಆರ್ಥಿಕ ವರ್ಷದಲ್ಲಿ ಬಾಕಿ ಉಳಿದಿರುವ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಿ, ಟೆಂಡರ್ ಪ್ರಕ್ರಿಯೆ ಪೂರ್ಣಗೊಳಿಸಿ, ಮಳೆಗಾಲ ಮುಗಿಯಲಿರುವುದರಿಂದ ಕಾಮಗಾರಿಯನ್ನು ಪ್ರಾರಂಭಿಸಲು ತ್ವರಿತವಾಗಿ ಸರ್ಕಾರ ಕ್ರಮ ಕೈಗೊಳ್ಳುವುದೇ? | |

**ಸಂಖ್ಯೆ: ಜಸಂಇ 168 ಎಂಎಲ್ಎ 2022**

(ಗೋವಿಂದ ಎಂ.ಕಾರಜೋಳ)
ಜಲಸಂಪನ್ಮೂಲ ಸಚಿವರು

## ಸೊರಬ ವಿಧಾನಸಭಾ ಕ್ಷೇತ್ರದ ತಾಳಗುಪ್ಪ ಹೋಬಳಿ ವ್ಯಾಪ್ತಿಯಲ್ಲಿ ಕೈಗೊಳ್ಳುತ್ತಿರುವ ಕಾಮಗಾರಿಗಳ ವಿವರ (ಅನುಬಂಧ-1)

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಕಾಮಗಾರಿಯ ಪ್ರಸ್ತುತ ಹಂತ |
|---|---|---|---|
| | **ರಸ್ತೆ ಕಾಮಗಾರಿಗಳು 2018-19** | | |
| 1 | ಸೊರಬ ವಿಧಾನಸಭಾ ಕ್ಷೇತ್ರದ ಸಾಗರ ತಾಲ್ಲೂಕಿನ ಮರತ್ತೂರು ಗ್ರಾಮದ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು | 50.00 | ಕಾಮಗಾರಿ ಪೂರ್ಣಗೊಂಡಿದೆ. |
| 2 | ಸಾಗರ ತಾಲ್ಲೂಕು ಖಂಡಿಕಾ ಗ್ರಾ .ಪಂ ಬ್ರಾಹ್ಮಣ ಕುಗ್ವೆಯಿಂದ ದೊಂಬೆ ಮಾರ್ಗವಾಗಿ ಖಂಡಿಕಾ ಮುಖ್ಯರಸ್ತೆಯವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | 50.00 | ಕಾಮಗಾರಿ ಪೂರ್ಣಗೊಂಡಿದೆ. |
| 3 | ಸಾಗರ ತಾಲ್ಲೂಕು ಖಂಡಿಕಾ ಗ್ರಾ .ಪಂ ಕೈತೋಟ ಬ್ರಾಹ್ಮಣರ ಕೇರಿಗೆ ಊರೊಳಗಿನ ರಸ್ತೆ ಅಭಿವೃದ್ಧಿ ಕಾಮಗಾರಿ | 25.00 | ಕಾಮಗಾರಿ ಪೂರ್ಣಗೊಂಡಿದೆ. |
| 4 | ಸಾಗರ ತಾಲ್ಲೂಕು ತಾಳಗುಪ್ಪ ಗ್ರಾ .ಪಂ ತಾಳಗುಪ್ಪದಿಂದ ಹಸುವಂತೆ ಹೋಗುವ ರಸ್ತೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | 25.00 | ಕಾಮಗಾರಿ ಪೂರ್ಣಗೊಂಡಿದೆ. |
| 5 | ಸಾಗರ ತಾಲ್ಲೂಕು ಶಿರವಂತೆ ಗ್ರಾ .ಪಂ ಎನ್. ಹೆಚ್. 206 ರಸ್ತೆಯಿಂದ ಗಾಳಿಪುರ ಮಾರ್ಗವಾಗಿ ಬರದವಳ್ಳಿ ಹೋಗುವ ರಸ್ತೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | 30.00 | ಕಾಮಗಾರಿ ಪೂರ್ಣಗೊಂಡಿದೆ. |
| 6 | ಸಾಗರ ತಾಲ್ಲೂಕು ಶಿರವಂತೆ ಗ್ರಾಮ ಪಂಚಾಯಿತಿ ಗಾಳಿಪುರ ಗ್ರಾಮದ ರಸ್ತೆ ಅಭಿವೃದ್ಧಿ | 50.00 | ಕಾಮಗಾರಿ ಪೂರ್ಣಗೊಂಡಿದೆ. |
| 7 | ಸಾಗರ ತಾಲ್ಲೂಕು ಶಿರವಂತೆ ಗ್ರಾಮ ಪಂಚಾಯಿತಿ ಬರದವಳ್ಳಿ ಕಲ್ಲರೆ ಮುಖ್ಯ ರಸ್ತೆ ಅಭಿವೃದ್ಧಿ | 25.00 | ಕಾಮಗಾರಿ ಪೂರ್ಣಗೊಂಡಿದೆ. |
| 8 | ಸಾಗರ ತಾಲ್ಲೂಕು ಖಂಡಿಕಾ ಗ್ರಾಮ ಪಂಚಾಯಿತಿ ಕೈತೋಟ ಗ್ರಾಮದ ರಸ್ತೆ ಅಭಿವೃದ್ಧಿ | 30.00 | ಕಾಮಗಾರಿ ಪೂರ್ಣಗೊಂಡಿದೆ. |
| 9 | ಸಾಗರ ತಾಲ್ಲೂಕು ಸೈದೂರ ಗ್ರಾಮ ಪಂಚಾಯಿತಿ ಬಳೆಗಾರು ಕೊಪ್ಪ ಊರಿನ ರಸ್ತೆ ಅಭಿವೃದ್ಧಿ | 25.00 | ಕಾಮಗಾರಿ ಪೂರ್ಣಗೊಂಡಿದೆ. |
| 10 | ಸಾಗರ ತಾಲ್ಲೂಕು ಮರತ್ತೂರು ಗ್ರಾಮ ಪಂಚಾಯಿತಿ ಬಲೆಗಾರು ಊರಿನ ರಸ್ತೆ ಅಭಿವೃದ್ಧಿ | 25.00 | ಕಾಮಗಾರಿ ಪೂರ್ಣಗೊಂಡಿದೆ. |
| 11 | ಸಾಗರ ತಾಲ್ಲೂಕು ಕಾನ್ಲೆ ಗ್ರಾಮ ಪಂಚಾಯಿತಿ ಕೆಲುವೆ ಗ್ರಾಮದ ರಸ್ತೆ ಅಭಿವೃದ್ಧಿ | 25.00 | ಕಾಮಗಾರಿ ಪೂರ್ಣಗೊಂಡಿದೆ. |

| 12 | ಸಾಗರ ತಾಲ್ಲೂಕು ಖಂಡಿಕಾ ಗ್ರಾಮ ಪಂಚಾಯಿತಿ ದೊಂಬೆ ಗ್ರಾಮದ ಉಮೇಶ್ ರವರ ಮನೆ ರಸ್ತೆ ಅಭಿವೃದ್ಧಿ | 25.00 | ಕಾಮಗಾರಿ ಪೂರ್ಣಗೊಂಡಿದೆ. |
|---|---|---|---|
| 13 | ಸಾಗರ ತಾಲ್ಲೂಕು ತಾಳಗುಪ್ಪ ಗ್ರಾಮ ಪಂಚಾಯಿತಿ ತಾಳಗುಪ್ಪ ಗ್ರಾಮದ ದೊಡ್ಡಿ ರಸ್ತೆ ಅಭಿವೃದ್ಧಿ | 30.00 | ಕಾಮಗಾರಿ ಪೂರ್ಣಗೊಂಡಿದೆ. |
| 14 | ಖಂಡಿಕೆ ಗ್ರಾಮ ಪಂಚಾಯ್ತಿಗೆ ಸೇರಿದ ಕುಗ್ವೆ ಗ್ರಾಮದಲ್ಲಿ ಸಾಗರ ನಗರಸಭೆ ಗಡಿಯಲ್ಲಿ ಬರುವ ಪ್ರಗತಿನಗರ ಬಡಾವಣೆ ರಸ್ತೆ ಅಭಿವೃದ್ಧಿ ಕಾಮಗಾರಿ | 145.00 | ಕಾಮಗಾರಿ ಪೂರ್ಣಗೊಂಡಿದೆ. |
| 15 | ಸಾಗರ ತಾಲ್ಲೂಕಿನ ಸೈದೂರು ಗ್ರಾಮ ಪಂಚಾಯ್ತಿ ವ್ಯಾಪ್ತಿಯ ಅತ್ತಿಸಾಲು-ಬೀಸನಗದ್ದೆಗೆ ಹೋಗುವ ರಸ್ತೆ ಅಭಿವೃದ್ಧಿ ಕಾಮಗಾರಿ | 40 | ಕಾಮಗಾರಿ ಪ್ರಗತಿಯಲ್ಲಿದೆ |
| 16 | ಸೊರಬ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ತಾಳಗುಪ್ಪ ಹೋಬಳಿಯ ಸೈದೂರು ಗ್ರಾಮ ಪಂಚಾಯಿತಿ ಬೀಸನಗದ್ದೆ ಗ್ರಾಮ ಸಂಪರ್ಕ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು. | 100 | ಕಾಮಗಾರಿ ಪ್ರಗತಿಯಲ್ಲಿದೆ |
| 17 | ಸೊರಬ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ತಾಳಗುಪ್ಪ ಹೋಬಳಿಯ ಸೈದೂರು ಗ್ರಾಮ ಪಂಚಾಯಿತಿ ಸುಳೂರು ಗ್ರಾಮದ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು. | 200 | ಕಾಮಗಾರಿ ಪ್ರಗತಿಯಲ್ಲಿದೆ |
| 18 | ಸೊರಬ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ತಾಳಗುಪ್ಪ ಹೋಬಳಿಯ ಹಿರೇನೆಲ್ಲೂರು ಗ್ರಾಮ ಪಂಚಾಯಿತಿ ಸಣ್ಣಮನೆ ಗ್ರಾಮದ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು. | 194.40 | ಕಾಮಗಾರಿ ಪೂರ್ಣಗೊಂಡಿದೆ. |
| 19 | ಸೊರಬ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ತಾಳಗುಪ್ಪ ಹೋಬಳಿಯ ಹಿರೇನೆಲ್ಲೂರು ಗ್ರಾಮ ಪಂಚಾಯಿತಿ ಸುರುಗುಪ್ಪೆ ಗ್ರಾಮದಿಂದ ಚಿಕ್ಕನೆಲ್ಲೂರು ಗ್ರಾಮದವರೆಗೆ ಸಂಪರ್ಕ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು. | 55.6 | |
| 20 | ತಾಳಗುಪ್ಪ ಹೋಬಳಿ ಕಾನ್ಲೆ ಗೌಡರ ಕೇರಿ ರಸ್ತೆ ಅಭಿವೃದ್ಧಿ ಕಾಮಗಾರಿ | 25.00 | ಕಾಮಗಾರಿ ಪ್ರಗತಿಯಲ್ಲಿದೆ |
| 21 | ತಾಳಗುಪ್ಪ ಹೋಬಳಿ ತಾಳಗುಪ್ಪದ ಒಕ್ಕಲಿಗರ ಚಂದ್ರ ಮನೆಯಿಂದ ಅಂಗಡಿ ಸರ್ಕಲ್‌ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | 25.00 | |
| 22 | ಶಿರವಂತೆ ಗ್ರಾಮ ಪಂಚಾಯ್ತಿ ಹೊಸಕೊಪ್ಪ ಗ್ರಾಮದ ರಸ್ತೆ ಅಭಿವೃದ್ಧಿ ಕಾಮಗಾರಿ | 25.00 | |
| 23 | ಶಿರವಂತೆ ಗ್ರಾಮ ಪಂಚಾಯ್ತಿ ನವುಲೆಮನೆ ಸೇತುವೆ ನಿರ್ಮಾಣ ಕಾಮಗಾರಿ | 25.00 | |
| 24 | ಮರತ್ತೂರು ಗ್ರಾಮ ಪಂಚಾಯ್ತಿ ಹುಣಸೂರು ಗ್ರಾಮದ ಗೌಡರ ಹುಚ್ಚಪ್ಪ ಮನೆಯಿಂದ ಎ.ಕೆ. ಭೂತಪ್ಪ ಮನೆಯವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | 25.00 | To be started |
| 25 | ಖಂಡಿಕೆ ಗ್ರಾಮ ಪಂಚಾಯ್ತಿಗೆ ಸೇರಿದ ಕುಗ್ವೆ ಗ್ರಾಮದಲ್ಲಿ ಸಾಗರ ನಗರಸಭೆ ಗಡಿಯಲ್ಲಿ ಬರುವ ಪ್ರಗತಿನಗರ ಬಡಾವಣೆ ಉದ್ಯಾನವನ ಅಭಿವೃದ್ಧಿ ಕಾಮಗಾರಿ | 25.00 | Tender process |
| | ಒಟ್ಟು | 1300.00 | |

|  | SCP WORKS 2019-20 |  |  |
| --- | --- | --- | --- |
| 26 | ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು ತಾಳಗುಪ್ಪ ಹೋಬಳಿ ಖಂಡಿಕಾ ಗ್ರಾಮದಿಂದ ಕಲ್ಮಕ್ಕಿ ಗ್ರಾಮದ ಮೂಲಕ ಹಂಸಗಾರು ಮುಖ್ಯ ರಸ್ತೆಯವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | ₹ 100.00 | ಕಾಮಗಾರಿ ಪೂರ್ಣಗೊಂಡಿದೆ. |
|  | ಒಟ್ಟು | ₹ 100.00 |  |
|  | **ಸಮುದಾಯ ಭವನ ಕಾಮಗಾರಿಗಳು-ಸೊರಬ ವಿಧಾನಸಭಾ ಕ್ಷೇತ್ರ 2019-20** |  |  |
|  | **ಪ್ಯಾಕೇಜ್ ಸಂಖ್ಯೆ: 48** |  |  |
| 1 | ಸಾಗರ ತಾಲ್ಲೂಕು ತಾಳಗುಪ್ಪ ಹೋಬಳಿ ವ್ಯಾಪ್ತಿಯ ಬರದವಳ್ಳಿ ಗ್ರಾಮದ ಶ್ರೀ ಕುಮಾರ ರಾಮೇಶ್ವರ ದೇವಸ್ಥಾನದ ಹತ್ತಿರ ಸಮುದಾಯ ಭವನ ನಿರ್ಮಾಣ | 10.00 | Completed |
| 2 | ಸಾಗರ ತಾಲ್ಲೂಕು ತಾಳಗುಪ್ಪ ಹೋಬಳಿ ವ್ಯಾಪ್ತಿಯ ಕೆ.ಜಿ. ಕೊಪ್ಪ ಗ್ರಾಮದ ಶ್ರೀ ರಾಮೇಶ್ವರ ದೇವಸ್ಥಾನದ ಹತ್ತಿರ ಹತ್ತಿರ ಸಮುದಾಯ ಭವನ ನಿರ್ಮಾಣ | 10.00 |  |
| 3 | ಸಾಗರ ತಾಲ್ಲೂಕು ತಾಳಗುಪ್ಪ ಹೋಬಳಿ ವ್ಯಾಪ್ತಿಯ ಕುಗ್ವೆ ಗ್ರಾಮದ ಶ್ರೀ ಈಶ್ವರ ದೇವಸ್ಥಾನದ ಹತ್ತಿರ ಸಮುದಾಯ ಭವನ ನಿರ್ಮಾಣ | 10.00 | Site Issue |
| 4 | ಸಾಗರ ತಾಲ್ಲೂಕು ತಾಳಗುಪ್ಪ ಹೋಬಳಿ ವ್ಯಾಪ್ತಿಯ ಗೊಳಗೋಡು ಗ್ರಾಮದ ಶ್ರೀ ತ್ರಯಂಬೇಕೇಶ್ವರ ದೇವಸ್ಥಾನದ ಹತ್ತಿರ ಸಮುದಾಯ ಭವನ ನಿರ್ಮಾಣ | 10.00 | Completed |
| 5 | ಸಾಗರ ತಾಲ್ಲೂಕು ತಾಳಗುಪ್ಪ ಹೋಬಳಿ ವ್ಯಾಪ್ತಿಯ ಮಾರನಕುಳಿ ಗ್ರಾಮದ ಶ್ರೀ ಸಿದ್ಧಿವಿನಾಯಕ ದೇವಸ್ಥಾನದ ಹತ್ತಿರ ಸಮುದಾಯ ಭವನ ನಿರ್ಮಾಣ | 10.00 |  |
| 6 | ಸಾಗರ ತಾಲ್ಲೂಕು ಶಿರವಂತೆ ಗ್ರಾಮದ ಈಶ್ವರ ದೇವಸ್ಥಾನದ ಹತ್ತಿರ ಸಾರ್ವಜನಿಕ ಸಮುದಾಯ ಭವನ | 15.00 |  |
| 7 | ಸಾಗರ ತಾಲ್ಲೂಕು ಬೆಳ್ಳಣ್ಣೆ ಗ್ರಾಮದ ಶ್ರೀ ಶಂಬುಲಿಂಗೇಶ್ವರ ದೇವಸ್ಥಾನದ ಹತ್ತಿರ ಸಾರ್ವಜನಿಕ ಸಮುದಾಯ ಭವನ | 15.00 |  |
| 8 | ಸಾಗರ ತಾಲ್ಲೂಕು ಸಸರವಳ್ಳಿ ಗ್ರಾಮದ ಮಹಾಗಣಪತಿ ದೇವಸ್ಥಾನದ ಹತ್ತಿರ ಸಾರ್ವಜನಿಕ ಸಮುದಾಯ ಭವನ | 15.00 |  |
|  | ಒಟ್ಟು | **95.00** |  |

## ಕರ್ನಾಟಕ ವಿಧಾನ ಸಭೆ

1. ಸದಸ್ಯರ ಹೆಸರು : ಶ್ರೀ ಕುಮಾರ ಬಂಗಾರಪ್ಪ. ಎಸ್ (ಸೊರಬ)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 699
3. ಉತ್ತರಿಸಬೇಕಾದ ದಿನಾಂಕ : 20-09-2022

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು ನೇಮಕಗೊಂಡಾಗಿನಿಂದ ಕಳೆದ 10-12 ವರ್ಷಗಳಲ್ಲಿ ಸರ್ಕಾರದ ನೂರಾರು ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದು ಹಾಗೂ ದೇಶದಲ್ಲಿನ ಕರ್ನಾಟಕ ಗ್ರಾಮೀಣಾಭಿವೃದ್ಧಿ ಇಲಾಖೆಯನ್ನು ಸರ್ಕಾರದ ಕಾರ್ಯಕ್ರಮದ ಅನುಷ್ಠಾನ ಮಾಡುವಲ್ಲಿ ಪ್ರಥಮ ಅಥವಾ ದ್ವಿತೀಯ ಸ್ಥಾನದಲ್ಲಿ ತೆಗೆದುಕೊಂಡು ಹೋಗುತ್ತಿರುವ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು ಅನುಷ್ಠಾನ ಮಾಡಿರುವ 2007 ರಿಂದ 2011-12ರವರೆಗಿನ ಎಂಜಿಎನ್ಆರ್ಇಜಿಎ ಕಾಮಗಾರಿಗಳನ್ನು ಲೋಕಾಯುಕ್ತಕ್ಕೆ ವಹಿಸಿರುವುದನ್ನು ಹಿಂಪಡೆಯಲು ಸರ್ಕಾರ ಕ್ರಮ ಕೈಗೊಳ್ಳುವುದೇ; | ನಿಬಂಧಕರು, ಕರ್ನಾಟಕ ಲೋಕಾಯುಕ್ತ ರವರು ತಮ್ಮ ದಿನಾಂಕ:20-06-2020 ರ ಮಧ್ಯಂತರ ವರದಿಯಲ್ಲಿ 15 ವರ್ಷಗಳ ಹಳೆಯ ಪ್ರಕರಣಗಳನ್ನು ತನಿಖೆ ನಡೆಸುವುದು ಕಷ್ಟಸಾಧ್ಯವಾಗಿರುವುದರಿಂದ 2011-12 ನೇ ಸಾಲಿನ ಕಾಮಗಾರಿಗಳನ್ನು ಮಾತ್ರ ತನಿಖೆಗೆ ಒಳಪಡಿಸುವುದು ಸೂಕ್ತವಾಗಿರುತ್ತದೆ ಎಂದು ಸರ್ಕಾರದ ಗಮನಕ್ಕೆ ತಂದಿರುತ್ತಾರೆ. ಲೋಕಾಯುಕ್ತರ ಅಭಿಪ್ರಾಯದ ಮೇರೆಗೆ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ 2007-08 ನೇ ಸಾಲಿನಿಂದ 2011-12ನೇ ಸಾಲಿನವರೆಗೆ ಕೈಗೊಂಡ ಎಲ್ಲಾ ಕಾಮಗಾರಿಗಳನ್ನು ಲೋಕಾಯುಕ್ತ ತನಿಖೆಗೆ ವಹಿಸಿರುವ ಆದೇಶವು ಸರ್ಕಾರದ ಹಂತದಲ್ಲಿ ಮರುಪರಿಶೀಲನೆಯಲ್ಲಿರುತ್ತದೆ. |
| ಆ) | ಸದರಿ ಆರ್ಥಿಕ ವರ್ಷದ ಕಾಮಗಾರಿಗಳನ್ನು ವಿವಿಧ ಹಂತಗಳಲ್ಲಿ ಸಾಮಾಜಿಕ ಲೆಕ್ಕ ತಪಾಸಣೆ, ಇನ್ನಿತರ ಸಂಸ್ಥೆಗಳ ಮೂಲಕ ತಪಾಸಣೆ ಮಾಡಿದ ನಂತರ ಪುನಃ ಲೋಕಾಯುಕ್ತಕ್ಕೆ ವಹಿಸುವುದರಿಂದ ನಿರ್ದಿಷ್ಟ ಅಧಿಕಾರಿಗಳ ಹಾಗೂ ಇಲಾಖೆಯ ನೌಕರರ ಭವಿಷ್ಯದ ಮೇಲೆ ದುಷ್ಪರಿಣಾಮವಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಗಮನಕ್ಕೆ ಬಂದಿರುತ್ತದೆ. |

ಸಂಖ್ಯೆ: ಗ್ರಾಅಪ 702(3) ಉಖಾಯೋ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 700 |
| 2. | ಪ್ರಶ್ನೆ ಕೇಳಿದ ಸದಸ್ಯರು | ಶ್ರೀ.ನರಸಿಂಹನಾಯಕ್ (ರಾಜುಗೌಡ) (ಸುರಪುರ) |
| 3. | ಉತ್ತರಿಸುವ ದಿನಾಂಕ | 20.09.2022 |
| 4. | ಉತ್ತರಿಸುವ ಸಚಿವರು | ಮುಖ್ಯಮಂತ್ರಿಯವರು |

******

| | ಪ್ರಶ್ನೆ | ಉತ್ತರ |
|---|---|---|
| (ಅ) | ಆಗಸ್ಟ್ 15ರ ಸ್ವಾತಂತ್ರ್ಯ ದಿವಸ ಹಾಗೂ ಜನವರಿ 26ರ ಗಣರಾಜ್ಯೋತ್ಸವದ ಆಚರಣೆ ಸಂದರ್ಭದಲ್ಲಿ ರಾಷ್ಟ್ರಪಿತ ಮಹಾತ್ಮಗಾಂಧಿಜೀಯವರ ಭಾವಚಿತ್ರದೊಂದಿಗೆ ಇನ್ನಿತರರ ಭಾವಚಿತ್ರ ಕಡ್ಡಾಯವಾಗಿ ಇಡುವಂತೆ ಸರ್ಕಾರ ಯಾವಾಗ ಆದೇಶ ಹೊರಡಿಸಿದೆ? (ವಿವರ ನೀಡುವುದು) | ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 7 ಹೆಚ್‌ಪಿಎ 2020 ದಿನಾಂಕ:25.01.2020ರನ್ವಯ ಜನವರಿ 26 ನೇ ದಿನಾಂಕದಂದು ರಾಜ್ಯದ ಸರ್ಕಾರಿ ಕಛೇರಿಗಳು, ಸರ್ಕಾರಿ ಸ್ವಾಮ್ಯಕ್ಕೆ ಒಳಪಡುವ ಸಂಸ್ಥೆಗಳು ಹಾಗೂ ಸರ್ಕಾರಿ ಶಾಲಾ-ಕಾಲೇಜು ಸೇರಿದಂತೆ ಸರ್ಕಾರದ ವತಿಯಿಂದ ನಡೆಯುವ ಎಲ್ಲಾ ಗಣರಾಜ್ಯೋತ್ಸವ ಸಮಾರಂಭಗಳಲ್ಲಿ ಸಂವಿಧಾನದ ಪಿತಾಮಹ, ಭಾರತರತ್ನ ಡಾ.ಬಿ.ಆರ್ ಅಂಬೇಡ್ಕರ್‌ರವರ ಭಾವಚಿತ್ರವನ್ನು ಕಡ್ಡಾಯವಾಗಿ ಇಡುವಂತೆ ಸೂಚಿಸಲಾಗಿರುತ್ತದೆ (ಪ್ರತಿ ಲಗತ್ತಿಸಿದೆ). |

(ಸಂಖ್ಯೆ:ಸಿಆಸುಇ 64 ಹೆಚ್‌ಪಿಎ 2022)

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

**ಕರ್ನಾಟಕ ಸರ್ಕಾರ**

ಸಂಖ್ಯೆ:ಸಿಆಸುಇ 7 ಹೆಚ್‌ಪಿಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ:25.01.2020.

**ಸುತ್ತೋಲೆ**

ವಿಷಯ: ಗಣರಾಜ್ಯೋತ್ಸವ ಸಮಾರಂಭಗಳಲ್ಲಿ ಡಾ:ಬಿ.ಆರ್.ಅಂಬೇಡ್ಕರ್ ರವರ ಭಾವಚಿತ್ರವನ್ನು ಇಡುವ ಬಗ್ಗೆ.

*****

ಜನವರಿ 26ನೇ ದಿನಾಂಕದಂದು ರಾಜ್ಯದ ಸರ್ಕಾರಿ ಕಛೇರಿಗಳು, ಸರ್ಕಾರಿ ಸ್ವಾಮ್ಯಕ್ಕೆ ಒಳಪಡುವ ಸಂಸ್ಥೆಗಳು ಹಾಗೂ ಸರ್ಕಾರಿ ಶಾಲಾ ಕಾಲೇಜು ಸೇರಿದಂತೆ ಸರ್ಕಾರದ ವತಿಯಿಂದ ನಡೆಯುವ ಎಲ್ಲಾ ಗಣರಾಜ್ಯೋತ್ಸವ ಸಮಾರಂಭಗಳಲ್ಲಿ ಸಂವಿಧಾನದ ಪಿತಾಮಹ, ಭಾರತ ರತ್ನ ಡಾ॥ ಬಿ.ಆರ್.ಅಂಬೇಡ್ಕರ್ ರವರ ಭಾವಚಿತ್ರವನ್ನು ಕಡ್ಡಾಯವಾಗಿ ಇಡುವಂತೆ ಸೂಚಿಸಲಾಗಿದೆ.

ಸರ್ಕಾರದ ಅಧೀನ ಕಾರ್ಯದರ್ಶಿ-1
ಸಿಆಸು ಇಲಾಖೆ (ರಾಜ್ಯ ಶಿಷ್ಟಾಚಾರ)

ಇವರಿಗೆ:

1) ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿಗಳು.
2) ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು.
3) ರಾಜ್ಯಪಾಲರ ಪ್ರಧಾನ ಕಾರ್ಯದರ್ಶಿಗಳು, ರಾಜಭವನ, ಬೆಂಗಳೂರು.
4) ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ.
5) ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ.
6) ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್.
7) ಎಲ್ಲಾ ವಿಭಾಗಾಧಿಕಾರಿಗಳು.
8) ಎಲ್ಲಾ ಇಲಾಖಾ ಮುಖ್ಯಸ್ಥರುಗಳು.
9) ಎಲ್ಲಾ ಜಿಲ್ಲಾಧಿಕಾರಿಗಳು.
10) ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.
11) ಎಲ್ಲಾ ಸಚಿವರ ಆಪ್ತ ಕಾರ್ಯದರ್ಶಿಗಳು.
12) ಪತ್ರಿಕಾ ಪ್ರಕಟಣೆ / ಹೆಚ್ಚುವರಿ ಪ್ರತಿಗಳು.

ಪ್ರತಿ ಮಾಹಿತಿಗಾಗಿ:

1) ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ.
2) ಸರ್ಕಾರದ ಕಾರ್ಯದರ್ಶಿ, ಸಿಆಸು ಇಲಾಖೆ ಇವರ ಆಪ್ತ ಕಾರ್ಯದರ್ಶಿ.
3) ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ರಾಜಕೀಯ)